


Vol-16 Issue No. 07 July - 2019 ₹ 10/-

# ಹೃದಯಪೂರ್ವಕ ಅಭಿನಂದನೆಗಳು

# Hearty Congratulations

## ಶ್ರೀ ಬಿ.ಎಸ್. ಯಡಿಯೂರಪ್ಪ

ಸನ್ಮಾನ್ಯ ಮುಖ್ಯಮಂತ್ರಿಗಳು, ಕರ್ನಾಟಕ ಸರ್ಕಾರ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ರಾಜ್ಯ ಸಂಸ್ಥೆಗೆ ಮುಂದಿನ ಅಧ್ಯಕ್ಷರಾಗಲಿರುವ ಸನ್ಮಾನ್ಯ ಮುಖ್ಯಮಂತ್ರಿಗಳಿಗೆ ಸಂಸ್ಥೆಯಿಂದ ಶುಭಾಶಯಗಳನ್ನು ಕೋರುತ್ತೇವೆ.







ಮೈಸೂರು ಸಂಸ್ಥಾನದ ಮಹಾರಾಜರು ಹಾಗು
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ
ಚೀಫ್ ಕಬ್ ಆಗಿ ಸೇವೆಸಲ್ಲಿಸಿದ

## ಶ್ರೀ ಜಯಚಾಮರಾಜ ಒಡೆಯರ್ ಅವರ

## ಜನ್ಮಶತಮಾನೋತ್ಸವ

ಕಾರ್ಯಕ್ರಮವು ಜುಲೈ 18, 2019ರಂದು
ಮೈಸೂರಿನ ಅರಮನೆಯಲ್ಲಿ ಜರುಗಿತು.
ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯಅವರು
ಕಾರ್ಯಕ್ರಮದಲ್ಲಿ ಭಾಗವಹಿಸಿ ಶುಭಕೋರಿದರು.




ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಶಿವಮೊಗ್ಗ ಜಿಲ್ಲಾ ಸಂಸ್ಥೆಗೆ ನೂರುವರ್ಷ ತುಂಬಿದ ಪ್ರಯುಕ್ತ ಜುಲೈ 19, 2019ರಂದು ಶತಮಾನೋತ್ಸವ ಆಚರಣೆ ಮತ್ತು ಲಾಂಛನವನ್ನು ಜಿಲ್ಲಾಧಿಕಾರಿಗಳಾದ ಶ್ರೀ ಕೆ.ಎ. ದಯಾನಂದರವರು ಉದ್ಘಾಟಿಸಿದರು. ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಹೆಚ್.ಡಿ. ರಮೇಶ್‌ಶಾಸ್ತ್ರಿ, ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ಶಕುಂತಲಾ ಚಂದ್ರಶೇಖರ, ಜಿಲ್ಲಾ ಕಾರ್ಯದರ್ಶಿ ಶ್ರೀ ಕೆ.ಪಿ. ಬಿಂದುಕುಮಾರ್, ಜಿಲ್ಲಾ ಖಜಾಂಜಿ ಶ್ರೀ ಚುಡಾಮಣಿ ಇ. ಪವಾರ್, ಜಿಲ್ಲಾ ಸಂಪರ್ಕಾಧಿಕಾರಿ ಶ್ರೀ ಜಿ. ವಿಜಯಕುಮಾರ್, ಜಿಲ್ಲಾ ತರಬೇತಿ ಆಯುಕ್ತರುಗಳಾದ ಶ್ರೀ ಟಿ.ಎ. ಮಂಜುನಾಥಾಚಾರ್ ಮತ್ತು ಶ್ರೀಮತಿ ಸಿ.ಎಸ್. ಕಾತ್ಯಾಯಿನಿ, ಎ.ಎಸ್.ಓ.ಸಿ(ಜಿ) ಶ್ರೀಮತಿ ಭಾರತಿ ಡಯಾಸ್ ಹಾಗೂ ಇತರರು ಚಿತ್ರದಲ್ಲಿದ್ದಾರೆ.

8 9

ಕರ್ನಾಟಕ ಸ್ಕೌಟ್ ಮತ್ತು ಗೈಡ್
ಮಾಸಿಕ ವಾರ್ತಾಪತ್ರಿಕೆ

150 YEARS OF CELEBRATING THE MAHATMA

KARNATAKA Scout & Guide
MONTHLY NEWS MAGAZINE



ದೂ: 080-2226 0017, 2226 7470
ನಮ್ಮ ಸಂಸ್ಥೆಯ ವೆಬ್‌ಸೈಟ್:
www.bsgkarnataka.org
ನಮ್ಮ ಸಂಸ್ಥೆಯ ಫೇಸ್‌ಬುಕ್:
The Bharat Scout-Guide, karnataka

**ಸಂಚಿಕೆಯ ವಾರ್ಷಿಕ ಚಂದಾ ರೂ. 100/-**
ವಿದ್ಯಾಸಂಸ್ಥೆ ಹಾಗೂ ಸಂಘ-ಸಂಸ್ಥೆಗಳಿಗೆ ವಾರ್ಷಿಕ ಚಂದಾ ರೂ.100/- ಚಂದಾಹಣವನ್ನು ಸಂಪಾದಕರು, ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ #39, ಅರಮನೆ ರಸ್ತೆ, ಬೆಂಗಳೂರು-560 001 ಇಲ್ಲಿಗೆ ಕಳುಹಿಸಲು ಕೋರಿದೆ.

## ಪರಿವಿಡಿ

# ರಾಜ್ಯ ಮುಖ್ಯ ಆಯುಕ್ತರ ನುಡಿ



ನನ್ನ ಪ್ರೀತಿಯ ಸ್ಕೌಟ್ಸ್ ಮತ್ತು ಗೈಡ್ಸ್ ಗೆಳೆಯರೇ,
ಸಸ್ನೇಹ ನಮಸ್ಕಾರಗಳು

**ತಿಂಗಳ ಧ್ಯೇಯ ವಾಕ್ಯ: "ಉಳಿಸಿ ಮುಂಗಾರು ತುಂತುರು"**

ಭಾರತೀಯ ಬಾಹ್ಯಾಕಾಶ ಸಂಸ್ಥೆ (ISRO)ಗೆ ನಿಮ್ಮೆಲ್ಲರ ಪರವಾಗಿ ಹೃದಯಪೂರ್ವಕವಾಗಿ ಅಭಿನಂದಿಸಲು ನನಗೆ ಅತೀವ ಸಂತೋಷವಾಗುತ್ತಿದೆ. ಈ ತಿಂಗಳ 22ರಂದು ಚಂದ್ರಯಾನ-2 ಕಾರ್ಯಕ್ರಮವು ಯಶಸ್ವಿಯಾಗಿ ನಡೆಯಿತು. ಚಂದ್ರನ ದಕ್ಷಿಣ ಧ್ರುವದಲ್ಲಿ ಪ್ರಜ್ಞಾನ್ ರೋವರನ್ನು ವಿಕ್ರಂ ಲ್ಯಾಂಡರ್ ಮೂಲಕ ಇಳಿಸುವ ಮಹತ್ತರ ವೈಜ್ಞಾನಿಕ ಸಾಧನೆಯನ್ನು ಮಾಡಲು ಭಾರತವು ಸಜ್ಜಾಗಿದೆ. ಸದಾಕಾಲವು ಕತ್ತಲಲ್ಲೇ ಇರುವ ನಾವು ಕಾಣದ ಚಂದ್ರನ ಹಿಂಬದಿಯಲ್ಲಿ ನೀರು ಇರಬಹುದೆಂದು ವಿಜ್ಞಾನಿಗಳು ಅನುಮಾನಿಸುತ್ತಿದ್ದಾರೆ. ಚಂದ್ರಯಾನ-01ರಲ್ಲಿ



ಚಂದ್ರನಲ್ಲಿ ನೀರಿನ ಇರುವಿಕೆಯನ್ನು ಗುರುತಿಸಿದ ಮೊದಲ ದೇಶ ಭಾರತವಾಗಿದೆ. ಸೌರವ್ಯವಸ್ಥೆಯ ಹುಟ್ಟು ಮತ್ತು ಬೆಳವಣಿಗೆಗಳ ಅಧ್ಯಯನ, ಚಂದ್ರನ ಮೇಲೆ ಮತ್ತು ನೆಲದಾಳದ ಅಧ್ಯಯನ, ಈ ಮಹಾಸಾಹಸದ ಗುರಿಗಳಾಗಿವೆ. ಭಾರತವು ವೈಜ್ಞಾನಿಕ ಶಕ್ತಿಯಾಗಿ ವಿಶ್ವದಲ್ಲಿ ಬೆಳೆಯುತ್ತಿದೆ. ನೀವೆಲ್ಲರೂ ಚಂದ್ರಯಾನ -02ರ ಬಗ್ಗೆ ತಿಳಿದುಕೊಳ್ಳಬೇಕು. ನಮ್ಮ ವಿಜ್ಞಾನಿಗಳ ಸಾಧನೆಯನ್ನು ಅರ್ಥಮಾಡಿಕೊಳ್ಳಬೇಕು. ಅವರಂತೆ, ನಿಮ್ಮ ಶೈಕ್ಷಣಿಕ ಜೀವನವನ್ನು ರೂಪಿಸಿಕೊಳ್ಳುವ ಪ್ರಯತ್ನವನ್ನು ಮಾಡಿರಿ.

ಜುಲೈ 18ರಂದು ಮೈಸೂರು ಸಂಸ್ಥಾನದ ಅರಸರಾಗಿದ್ದ ಹಾಗೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಚೀಫ್ ಕಬ್ ಆಗಿ ಸೇವೆ ಸಲ್ಲಿಸಿದ ಶ್ರೀ ಜಯಚಾಮರಾಜ ಒಡೆಯರ್‌ರವರ ಜನ್ಮಶತಮಾನೋತ್ಸವ ಕಾರ್ಯಕ್ರಮದಲ್ಲಿ ಭಾಗವಹಿಸಿ ಮಹಾರಾಣಿ ಶ್ರೀಮತಿ ಪ್ರಮೋದ ದೇವಿಯವರನ್ನು ಭೇಟಿಮಾಡಿ ಶುಭಕೋರಿದ್ದೇನೆ.



24ನೇಯ ವಿಶ್ವ ಸ್ಕೌಟ್ ಜಾಂಬೂರಿಯು ಜುಲೈ 22 ರಿಂದ ಆರಂಭವಾಗಿದೆ. 2 ವಾರಗಳ ಕಾಲ ನಡೆಯುವ ವಿಶ್ವ ಸ್ಕೌಟ್ ಜಾಂಬೂರಿಯು ವಿಶ್ವ ಭ್ರಾತೃತ್ವ ಮತ್ತು ಸಹಯೋಗವನ್ನು ಬಿಂಬಿಸುತ್ತದೆ. "Unlock a New World" (ಹೊಸ ವಿಶ್ವದ ಕೀಲಿ ತೆಗೆಯೋಣ) ಎಂಬ ಧ್ಯೇಯವಾಕ್ಯವನ್ನು ಹೊಂದಿದೆ. ಒಂದು ಲಕ್ಷಕ್ಕೂ ಹೆಚ್ಚು ಸ್ಕೌಟ್ಸ್ ಮತ್ತು ಸ್ಕೌಟರ್‌ಗಳು ಜಾಂಬೂರಿಯಲ್ಲಿ ಭಾಗವಹಿಸುತ್ತಿದ್ದಾರೆ. ಜಾಂಬೂರಿಯಲ್ಲಿ ನಡೆಯುವ ಚಟುವಟಿಕೆಗಳು ವೈಯಕ್ತಿಕ ಮತ್ತು ಸಾಮಾಜಿಕ ಬೆಳವಣಿಗೆಗೆ ಪೂರಕವಾಗಿರುತ್ತವೆ. ಹಗಲಿನಿಂದ ರಾತ್ರಿಯತನಕ ನಡೆಯುವ ಸಾಹಸ, ಮನರಂಜನೆ, ಶೈಕ್ಷಣಿಕ ಮೊದಲಾದ ಕಾರ್ಯಕ್ರಮಗಳು ಸರ್ವತೋಮುಖ ಬೆಳವಣಿಗೆಗೆ ಅನುವು ಮಾಡಿಕೊಡುತ್ತವೆ. ಜುಲೈ 22ರಂದು ಮತ್ತು 29 ರಂದು ಆರಂಭವಾಗುವ ಚಟುವಟಿಕೆಗಳು








ಆಗಸ್ಟ್ 4ರವರೆಗೆ ಪುನರಾವರ್ತಿತವಾಗುತ್ತವೆ. ಕರ್ನಾಟಕದಿಂದ ಭಾಗವಹಿಸುವ ಸ್ಕೌಟ್ಸ್/ ಸ್ಕೌಟರ್ಸ್ / ಸ್ಕೌಟ್ ಮಾಸ್ಟರ್ಸ್‌ಗಳೆಲ್ಲರೂ ವಿಶ್ವ ಜಾಂಬೂರಿಯ ತಮ್ಮ ಅನುಭವವನ್ನು ಮುಂದಿನ ಸಂಚಿಕೆಗಳಲ್ಲಿ ಹಂಚಿಕೊಳ್ಳುತ್ತಾರೆಂದು ನಾನು ನಿರೀಕ್ಷಿಸುತ್ತೇನೆ. ಜಾಂಬೂರಿಗಾಗಿ ಪ್ರಯಾಣಿಸಿರುವ ತಂಡವು ಯಶಸ್ವಿಯಾಗಿ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ಸಂಸ್ಥೆಯ ಕೀರ್ತಿಯನ್ನು ಹೆಚ್ಚಿಸುತ್ತವೆಯೆಂದು ನಾನು ಭಾವಿಸುತ್ತೇನೆ. 24ನೆಯ ಜಾಂಬೂರಿಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ಸಂಸ್ಥೆ ಮತ್ತು ವೈಯಕ್ತಿಕವಾಗಿ ಶುಭ ಹಾರೈಸುತ್ತೇನೆ.

ನನ್ನನ್ನು ಭಾರತೀಯ ತಂಡದ ನಾಯಕನನ್ನಾಗಿ ಆರಿಸಿರುವುದು ನಮ್ಮ ಸಂಸ್ಥೆಗೆ ಸಂದಿರುವ ಗೌರವವೆಂದು ಭಾವಿಸುತ್ತೇನೆ. ಈ ಗೌರವಕ್ಕಾಗಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಷ್ಟ್ರೀಯ ಸಂಸ್ಥೆಗೆ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಆಗಸ್ಟ್ 15ಕ್ಕೆ ಭಾರತವು ತನ್ನ 73ನೆಯ ಸ್ವಾತಂತ್ರ್ಯ ದಿನವನ್ನು ಆಚರಿಸುತ್ತಿದೆ. ಭಾರತವು ವಿಶ್ವದ ದೊಡ್ಡ ಆರ್ಥಿಕ, ವೈಜ್ಞಾನಿಕ ಮತ್ತು ಮಿಲಿಟರಿ ಶಕ್ತಿಗಳಲ್ಲೊಂದಾಗಿದೆ. ಯಶಸ್ವಿ ಪ್ರಜಾಪ್ರಭುತ್ವ ರಾಷ್ಟ್ರವಾಗಿ ಈ ಸಾಧನೆಯನ್ನು ನಾವು ಮಾಡಿದ್ದೇವೆ. ಯಶಸ್ಸಿಗೆ ಮೂಲ ಕಾರಣ ನಮ್ಮ ಶ್ರೀಸಾಮಾನ್ಯರು. ತಮ್ಮ ವೈಯಕ್ತಿಕ ಆಸೆ-ಆಕಾಂಕ್ಷೆಗಳಿಗಿಂತ ಮಿಗಿಲಾಗಿ ಭಾರತವನ್ನು ಅವರು ಪ್ರೀತಿಸುತ್ತಾರೆ. ಶ್ರಮವಹಿಸಿ ದೇಶದ, ಸಮಾಜದ ಏಳಿಗೆಗಾಗಿ ಶ್ರಮಿಸುತ್ತಿದ್ದಾರೆ.



ಕಳೆದ 72 ವರ್ಷಗಳಲ್ಲಿ ನಾವು ಬಹಿರಂಗ ಮತ್ತು ಆಂತರಿಕ ಸವಾಲುಗಳನ್ನು ಎದುರಿಸಿದ್ದೇವೆ. ಸಂಕಷ್ಟ ಸಮಯಗಳಿಗೆ ಮುಖಾ-ಮುಖಿಯಾಗಿದ್ದೇವೆ. ಪ್ರಜಾಪ್ರಭುತ್ವಕ್ಕಾಗಿ ನಮ್ಮ ಬದ್ಧತೆಯು ಈ ತೊಂದರೆಗಳನ್ನು ದಾಟಿ ಬರಲು ಸಹಾಯ ಮಾಡಿವೆ.

ನೀವೆಲ್ಲರೂ ಭಾರತದ ಭವಿಷ್ಯದ ದೀಪಗಳಾಗಿದ್ದೀರಿ. ವೈಯಕ್ತಿಕ ಬೆಳವಣಿಗೆಯೊಂದಿಗೆ ಸಮಾಜಕ್ಕೆ ಅನುಕೂಲಕರವಾದ ಕೆಲಸವನ್ನು ನಾವುಗಳು ಮಾಡಬೇಕು. ನಮ್ಮ ಚಾರಿತ್ರ್ಯವು ಬಹಳ ಮುಖ್ಯವೆಂದು ನಾನು ಭಾವಿಸುತ್ತೇನೆ. ಚಾರಿತ್ರ್ಯ ನಿರ್ಮಾಣ ಕಾರ್ಯದಲ್ಲಿ ಕ್ರಿಯಾಶೀಲವಾಗಿ ತೊಡಗಿಕೊಂಡಿರುವ ನಮ್ಮ ಸಂಸ್ಥೆಯು ಈ ದಿಶೆಯಲ್ಲಿ ಗಣನೀಯವಾದ ಕಾಣಿಕೆಯನ್ನು ನೀಡಿದೆ. 73ನೆಯ ಸ್ವಾತಂತ್ರ್ಯೋತ್ಸವ ಸಂದರ್ಭದಲ್ಲಿ ನಾವು ದೇಶದ ಸಮಗ್ರತೆ ಮತ್ತು ಸರ್ವತೋಮುಖ ಬೆಳವಣಿಗೆಗಾಗಿ ಮತ್ತೊಮ್ಮೆ ಸಂಕಲ್ಪ ತೊಡೋಣ.

**ಇದೇ ತಿಂಗಳ 26ರಂದು ಕರ್ನಾಟಕ ರಾಜ್ಯದ 32ನೇ ಮುಖ್ಯ ಮಂತ್ರಿಗಳಾಗಿ ಪ್ರಮಾಣ ವಚನ ಸ್ವೀಕರಿಸಿದ ಸನ್ಮಾನ್ಯ ಶ್ರೀ ಬಿ.ಎಸ್. ಯಡಿಯೂರಪ್ಪ ಅವರಿಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆ ಮತ್ತು ವೈಯಕ್ತಿಕವಾಗಿ ಹೃದಯಪೂರ್ವಕ ಅಭಿನಂದನೆಗಳನ್ನು ಸಲ್ಲಿಸುತ್ತೇನೆ.**



ನಮ್ಮ ತರಬೇತಿ ಕಾರ್ಯಕ್ರಮಗಳು ಯಶಸ್ವಿಯಾಗಿ ನಡೆಯುತ್ತಿವೆ. ಜಿಲ್ಲಾ ಸಂಸ್ಥೆಗಳು ಕ್ರಿಯಾಶೀಲವಾಗಿವೆ. ಅವುಗಳ ಚಟುವಟಿಕೆಗಳ ವರದಿಯನ್ನು ವಾರ್ತಾ ಪತ್ರದಲ್ಲಿ ಮುದ್ರಿಸುತ್ತಿದ್ದೇವೆ. ಕೆಲವು ಜಿಲ್ಲೆಗಳಿಂದ ವರದಿಗಳು ಬರುತ್ತಿಲ್ಲ. ಎಲ್ಲಾ ಜಿಲ್ಲೆಗಳು ವರದಿಯನ್ನು ತಪ್ಪದೇ ಕಳುಹಿಸಬೇಕೆಂದು ನಾನು ಆಗ್ರಹಿಸುತ್ತೇನೆ.

ಕಳೆದ ತಿಂಗಳಿನ ವಾರ್ತಾ ಪತ್ರಿಕೆಯಲ್ಲಿ ವಿವಿಧ ದಿನಪತ್ರಿಕೆಗಳಲ್ಲಿ ಪ್ರಕಟವಾಗಿರುವ ನಮ್ಮ ವರದಿ ಮತ್ತು ಚಟುವಟಿಕೆಗಳ ಛಾಯಾಚಿತ್ರಗಳನ್ನು ಮುದ್ರಿಸಿದ್ದೇವೆ. ಪ್ರತಿ ತಿಂಗಳು "ಮಾಧ್ಯಮಗಳಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ" ಎಂಬ ತಲೆಬರಹದಲ್ಲಿ ಪತ್ರಿಕಾ ವರದಿ ಮತ್ತು ಛಾಯಾಚಿತ್ರಗಳನ್ನು ಮುದ್ರಿಸಲಾಗುತ್ತದೆ. ದಯವಿಟ್ಟು ಸ್ಥಳೀಯ/ ತಾಲ್ಲೂಕು ಮತ್ತು ಜಿಲ್ಲಾ ಮಟ್ಟದಲ್ಲಿ ವರದಿಗಳನ್ನು ವಾರ್ತಾಪತ್ರಿಕೆಗೆ ಕಳುಹಿಸಿಕೊಡಿ.

ಸ್ಕೌಟ್ಸ್ ಮತ್ತು ಗೈಡ್ಸ್ ವಂದನೆಗಳೊಂದಿಗೆ,

ತಮ್ಮ ವಿಶ್ವಾಸಿ



(ಪಿ.ಜಿ.ಆರ್. ಸಿಂಧ್ಯ)

ರಾಜ್ಯ ಮುಖ್ಯ ಆಯುಕ್ತರು

# ಆಗಸ್ಟ 15

ಗೊ.ರು. ಚನ್ನಬಸಪ್ಪ
ಗೌರವ ಅಧ್ಯಕ್ಷರು
ಪ್ರಕಟಣಾ ಸಮಿತಿ, ಭಾ.ಸ್ಕೌ&ಗೈ, ಕರ್ನಾಟಕ

ನಮ್ಮ ಭಾರತದ ಇತಿಹಾಸದಲ್ಲಿ ಆಗಸ್ಟ್-15 ಒಂದು ಸ್ಮರಣೀಯ ದಿನ. ಬ್ರಿಟಿಷರ ಆಳ್ವಿಕೆ ಕೊನೆಗೊಂಡು ಭಾರತೀಯರೆಲ್ಲ ಸ್ವತಂತ್ರರಾದ ಆ ದಿನವನ್ನು ನಾವು ಪ್ರತಿವರ್ಷ ಸ್ವಾತಂತ್ರ್ಯ ದಿನಾಚರಣೆಗೆ ಮೀಸಲಿಟ್ಟಿದ್ದೇವೆ.

ಭಾರತ ಮಾನವಲೋಕದ ಪುರಾತನ ದೇಶ. ಪ್ರಾಚೀನ ಕಾಲದಿಂದ ವಿಶ್ವಕ್ಕೆ ಆಧ್ಯಾತ್ಮದ ಸಂದೇಶ ನೀಡುತ್ತ ಬಂದಿರುವ ಧರ್ಮಭೂಮಿ. ಭಾರತ ಭೌಗೋಳಿಕವಾಗಿ, ಪದ್ಧತಿ-ಪರಂಪರೆಗಳಿಂದಾಗಿ, ಹವಾಮಾನ - ಪ್ರಕೃತಿ ಪರಿಸರಗಳಿಂದಾಗಿ, ಭಾಷೆ-ಸಂಸ್ಕೃತಿಗಳಿಂದಾಗಿ ವೈವಿಧ್ಯದ ದೇಶ. ಆದರೆ ಆ ವೈವಿಧ್ಯತೆಯ ಮಧ್ಯೆ ಅಸಾಧಾರಣವಾದ ಏಕತೆಯನ್ನು ಕಾಪಾಡಿಕೊಂಡು ಬರಲಾಗಿದೆ.

ಇಂತಹ ಅನನ್ಯ ಹಿನ್ನೆಲೆಯನ್ನು ಪಡೆದಿರುವ ನಮ್ಮ ಭಾರತ ಕಾಲದ ಕೈತವಕ್ಕೆ ಸಿಕ್ಕಿ ವಿದೇಶಿಯರ ಕುತಂತ್ರಕ್ಕೆ ಬಲಿಯಾಗಿ ದಾಸ್ಯಕ್ಕೆ ಒಳಗಾದದ್ದು ಒಂದು ವಿಷಾದದ ಸಂಗತಿ. ಅದಕ್ಕೆ ಕಾರಣ, ನಮ್ಮಲ್ಲಿ ಒಗ್ಗಟ್ಟು ಇಲ್ಲದೇ ಹೋದದ್ದು.

ಸಮೃದ್ಧ ಭಾರತದ ಮೇಲೆ ವಿದೇಶಿ ಸಾಮ್ರಾಜ್ಯಶಾಹಿಗಳು, ಧಾಳಿಕೋರರು ಕಣ್ಣು ಹಾಕಿದ ಕಥೆ ಕ್ರಿ.ಪೂ. 500ನೆಯ ವರ್ಷದಷ್ಟು ಹಿಂದಕ್ಕೆ ಹೋಗುತ್ತದೆ. ದರ್ಶಕನೆಂಬ ರಾಜ ಮಗಧ ರಾಜ್ಯವನ್ನು ಆಳುತ್ತಿದ್ದಾಗ ಇರಾನಿನ ಡೇರಿಯಸ್ ಎಂಬುವನು ಭಾರತದ ಮೇಲೆ ಧಾಳಿ ನಡೆಸಿದ. ಕ್ರಿ.ಪೂ. 327 ರಲ್ಲಿ ಅಲೆಕ್ಸಾಂಡರ್ ಪ್ರವೇಶಿಸಿದ. ಆನಂತರ ಹೂಣರು, ಕುಶಾನರು, ಶಕರು, ಯವನರು ಆಗಿಂದಾಗ ದಾಳಿ ನಡೆಸುತ್ತಲೇ ಬಂದರು.

ನಮ್ಮ ಭಾರತವು ಪರಕೀಯರಿಂದ ಪೂರ್ಣದಾಸ್ಯಕ್ಕೆ ಸಿಕ್ಕಿಕೊಂಡು ನರಳಿದ್ದು ಬ್ರಿಟಿಷರ ಕಾಲದಲ್ಲಿ, ನಮಗೆಲ್ಲ ತಿಳಿದಿರುವಂತೆ ಬ್ರಿಟಿಷರೇನೂ ತೋಳ್ಬಲದಿಂದ ನಮ್ಮನ್ನು ಗೆಲ್ಲಲಿಲ್ಲ. ವ್ಯಾಪಾರದ ನೆಪದ ಮೇಲೆ ಬಂದ ಅವರು 'ಈಸ್ಟ್ ಇಂಡಿಯಾ ಕಂಪನಿ' ಹೆಸರಿನಲ್ಲಿ ಇಲ್ಲಿಗೆ ಸುಮಾರು 280 ವರ್ಷಗಳ ಹಿಂದೆ ಇಲ್ಲಿ ನೆಲೆಯೂರಿ, ನಾನಾ ಉಪಾಯಗಳಿಂದ ಇಲ್ಲಿನ ವ್ಯವಹಾರಗಳಲ್ಲಿ ಕೈವಾಡ ನಡೆಸಿ, ಕ್ರಮೇಣ ಇಡೀ ಭಾರತವನ್ನು ತಮ್ಮ ಅಧೀನಕ್ಕೆ ತೆಗೆದುಕೊಂಡು ನಮ್ಮನ್ನು ಆಳತೊಡಗಿದರು.

ಕಾಲಕ್ರಮೇಣ, ಅವರು ನಮ್ಮ ದೇಶದ ಸಂಪತ್ತನ್ನು ಸದ್ದಿಲ್ಲದೆ ತಮ್ಮ ದೇಶಕ್ಕೆ ಸಾಗಿಸತೊಡಗಿದರು. ಮತ್ತು ನಮ್ಮ ಜನರ ಮೇಲೆ ದಬ್ಬಾಳಿಕೆ ನಡೆಸತೊಡಗಿದರು. ಈ ಅನ್ಯಾಯವನ್ನು ಸಹಿಸಲಾಗದೆ ನಮ್ಮ ದೇಶದ ಕೆಲವು ಭಾಗಗಳಲ್ಲಿ ಬ್ರಿಟಿಷರ ವಿರುದ್ಧ ಪ್ರತಿರೋಧ ಆರಂಭವಾಯಿತು. ಬ್ರಿಟಿಷರ ಆಳ್ವಿಕೆಯ ವಿರುದ್ಧ ಹೋರಾಡಿದ ಮೊದಲಿಗರಲ್ಲಿ ಕಿತ್ತೂರು ರಾಣಿ ಚೆನ್ನಮ್ಮ, ಶ್ರೀರಂಗಪಟ್ಟಣದ ಟಿಪ್ಪು ಸುಲ್ತಾನ್ ಅವರು ಸ್ಮರಣೀಯರು.

ಹೀಗೆ ಸ್ಥಳೀಯವಾಗಿದ್ದ ಸ್ವಾತಂತ್ರ್ಯ ಹೋರಾಟಕ್ಕೆ ಸಾರ್ವತ್ರಿಕ ಸ್ವರೂಪ ಬಂದದ್ದು 1857 ರಲ್ಲಿ ನಡೆದ ಸಿಪಾಯಿ ದಂಗೆಯ ನಂತರ. 1885ರಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ರಚನೆಯಾದ ಮೇಲೆ ಇಡೀ ಭಾರತದಲ್ಲಿ ಸ್ವಾತಂತ್ರ್ಯದ ಕೂಗು ಕೇಳಿಸಲಾರಂಭಿಸಿತು.

ಇದನ್ನು ಕಂಡು ಬ್ರಿಟಿಷರು ಭಾರತೀಯರ ಮೇಲೆ ಮತ್ತಷ್ಟು ಹಿಂಸಾಚಾರ ನಡೆಸತೊಡಗಿದರು. ಸಹಸ್ರ ಸಹಸ್ರ ಜನರನ್ನು ಸೆರೆಮನೆಗೆ ತಳ್ಳಿ ಅವರನ್ನು ಹಿಂಸಿಸಲಾರಂಭಿಸಿದರು. ಆದರೆ ಬಾಲಗಂಗಾಧರ ತಿಲಕ, ಗೋಪಾಲ ಕೃಷ್ಣ ಗೋಖಲೆ, ಮಹದೇವ ಗೋವಿಂದ ರಾನಡೆ, ಮದನ ಮೋಹನ ಮಾಲವೀಯ, ಲಾಲಾ ಲಜಪತರಾಯ್,

ದಾದಾಭಾಯಿ ನವರೋಜಿ, ಮೋತಿಲಾಲ್ ನೆಹರೂ ಮೊದಲಾದ ನೂರಾರು ದೇಶಭಕ್ತರು ಜನರಲ್ಲಿ ಸ್ವಾಭಿಮಾನವನ್ನು ಮೂಡಿಸಿ, ಸ್ವಾತಂತ್ರ್ಯ ಹೋರಾಟದ ಸಾಮೂಹಿಕ ಜಾಗೃತಿ ಉಂಟುಮಾಡಿದರು. ಈ ಸ್ವಾತಂತ್ರ್ಯದ ಕಿಡಿಯನ್ನು ಪ್ರಜ್ವಲಗೊಳಿಸಿದ ಮಹಾತ್ಮ ಗಾಂಧಿ ಅವರನ್ನಂತೂ ನಾವು ಎಂದೆಂದಿಗೂ ಮರೆಯುವಂತಿಲ್ಲ.

ಸ್ವಾತಂತ್ರ್ಯ ಹೋರಾಟದಲ್ಲಿ ಗುಡ್ಡಗಾಡುಗಳಲ್ಲೂ ಸಹ ನಡೆದ ಹೋರಾಟಗಳೆಂದರೆ, ಕಾಂಪಾಗುಂಡಂ, ಬಸ್ತಾರ್, ಕೊಂಡ, ಮಯೂರ್ ಭಂಜ್, ಬರ್ಸಾ, ಮುಂಡ, ತಾನಾ ಭಾಗವತ್, ಮಣಿಪುರ, ಬಿಲ್ ಮೊರ್ಲಿ ಮೊದಲಾದವು. ಇನ್ನು ಒಳನಾಡಿನಲ್ಲಿ ಅಲಿಘರ್, ಅಸ್ಸಾಂ, ಬಿಹಾರ, ಬಂಗಾಳ, ಗುಜರಾತ್ ಚಳವಳಿಗಳು, ಬಾರ್ಡೋಲಿ, ಚಂಪಾರಣ್ಯ, ಕೌಲತ್ ಸತ್ಯಾಗ್ರಹಗಳು, ದಂಡಿಯಾತ್ರೆ, ಉಪ್ಪಿನ ಸತ್ಯಾಗ್ರಹ ಮತ್ತು ಧ್ವಜ ಸತ್ಯಾಗ್ರಹಗಳು, ರೈತ ಚಳವಳಿಗಳು – ಹೀಗೆ ಸಹಸ್ರಾರು ಸಂಘಟನೆಗಳು ಒಂದೇ ದನಿಯಾಗಿ ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸಿದವು.

ಹಾಗೆಯೇ ಯಂಗ್ ಇಂಡಿಯಾ, ಆಗಸ್ಟ್ ಬೇಡಿಕೆ, ವಂದೇಮಾತರಂ, ಸ್ವದೇಶಿ ಚಳವಳಿ, ಅಸಹಕಾರ ಚಳವಳಿ, ವಿದೇಶಿ ವಸ್ತು ಬಹಿಷ್ಕಾರ, ಗೋ ಸಂರಕ್ಷಣೆ, ಗಣಪತಿ ಉತ್ಸವ, ಗಿರಣಿ ಕಾಮಗಾರ ಸಂಘಟನೆ, ನೌಜವಾನ್, ಭಾರತ್ ಸಭಾ, ಪ್ರಾರ್ಥನಾ ಸಮಾಜ, ಪ್ರಜಾ ಚಳವಳಿ, ಆತ್ಮಗೌರವ ಆಂದೋಲನ, ಪ್ರಗತಿಪರ ಬರಹಗಾರರ ಸಂಘ – ಹೀಗೆ ನಾನಾ ರೂಪದಲ್ಲಿ ಭಾರತಾದ್ಯಂತ ಹೋರಾಟ ನಡೆಯಿತು.

ಈ ಹೋರಾಟದಲ್ಲಿ ಕರ್ನಾಟಕದ ಪಾಲು ಸ್ಮರಣೀಯವಾದುದು. 1930ರಲ್ಲಿ 45 ದಿನ ನಡೆದ ಉತ್ತರ ಕನ್ನಡ ಜಿಲ್ಲಾ ಅಂಕೋಲಾ ಉಪ್ಪಿನ ಸತ್ಯಾಗ್ರಹ, 1938ರಲ್ಲಿ ಮಂಡ್ಯ ಜಿಲ್ಲೆಯ ಮದ್ದೂರು ತಾಲೂಕು ಶಿವಪುರದಲ್ಲಿ ನಡೆದ ರಾಜ್ಯ ಮಟ್ಟದ ಕಾಂಗ್ರೆಸ್ ಅಧಿವೇಶನ, 1926 ರಲ್ಲಿ ಕೋಲಾರ ಜಿಲ್ಲಾ ವಿಧುರಾಶ್ವತ್ಥದಲ್ಲಿ ನಡೆದ ಸಾರ್ವಜನಿಕ ಸಭೆ, ಶಿವಮೊಗ್ಗ ಜಿಲ್ಲೆಯ ಈಸೂರಿನಲ್ಲಿ ನಡೆದ ದುರಂತ – ಈ ಎಲ್ಲ ಸಂದರ್ಭಗಳಲ್ಲೂ ಕರ್ನಾಟಕದ ಸಹಸ್ರಾರು ಜನ ಸೆರೆಮನೆ ಸೇರಿದರು; ಸಹಸ್ರಾರು ಜನ ಪೊಲೀಸರ ಲಾಠಿ ಏಟುಗಳಿಗೆ ಈಡಾದರು, ನೂರಾರು ಜನ ಗಲ್ಲು ಮತ್ತಿತರ ಸಾವಿಗೆ ಬಲಿಯಾದರು. ಇಂತಹ ಸಾವು–ನೋವುಗಳು ಭಾರತದ ಮೂಲೆ ಮೂಲೆಯಲ್ಲೂ ಕಂಡುಬಂದವು.

ಭಾರತದ ಐಕ್ಯ ಹೋರಾಟವನ್ನು ಕಂಡು ಬ್ರಿಟಿಷ್ ಸರ್ಕಾರ ಹೆದರಿತು. ಇನ್ನು ಹೆಚ್ಚುಕಾಲ ಈ ದೇಶದವನ್ನು ಆಳಲು ಆಗುವುದಿಲ್ಲ ಎಂದು ಮನಗಂಡು 1947ರ ಆಗಸ್ಟ್ 15 ರಂದು (14ರ ಮಧ್ಯರಾತ್ರಿ) ಭಾರತವು ಸ್ವತಂತ್ರ ರಾಷ್ಟ್ರ ಎಂದು ಘೋಷಿಸಿ, ಅಧಿಕಾರವನ್ನು ಭಾರತೀಯರಿಗೇ ಒಪ್ಪಿಸಿ ಇಲ್ಲಿದ್ದ ಬ್ರಿಟಿಷರೆಲ್ಲ ತಮ್ಮ ದೇಶಕ್ಕೆ ಹಿಂತಿರುಗಿದರು.

ನೂರಾರು ವರ್ಷಗಳ ದೀರ್ಘಹೋರಾಟದ ಫಲವಾಗಿ ದೊರೆತ ಸ್ವಾತಂತ್ರ್ಯದ ದಿನ ಆಗಸ್ಟ್ 15. ಭಾರತ ಸ್ವಾತಂತ್ರ್ಯ ಮರಳ ರಾಶಿಯ ಮೇಲೆ ನಿಲ್ಲಿಸಿದ ಮಣ್ಣಿನ ಮನೆಯಲ್ಲ; ಸಹಸ್ರಾರು ಜನರ ತ್ಯಾಗ ಮತ್ತು ಬಲಿದಾನಗಳ ವಜ್ರಾರೆಯ ಮೇಲೆ ನಿರ್ಮಿಸಿದ ಭದ್ರಕೋಟೆ. ಪ್ರತಿವರ್ಷ ಆಗಸ್ಟ್ 15 ರಂದು ಸ್ವಾತಂತ್ರ್ಯ ದಿನವನ್ನು ಆಚರಿಸುವ ನಾವು ನಮ್ಮ ಹಿರಿಯರು ಪಟ್ಟಶ್ರಮ, ಅನುಭವಿಸಿದ ಕಷ್ಟ–ನಷ್ಟ, ನೋವು–ಸಾವುಗಳನ್ನು ಮರೆಯಬಾರದು.

ಹಿಂದೆ ಸ್ವಾತಂತ್ರ್ಯ ಸಂಪಾದನೆಗೆ ಹೇಗೆ ನಮ್ಮ ಹಿರಿಯರು ಶ್ರಮಿಸಿದರೋ, ಅದಕ್ಕಿಂತ ಮಿಗಿಲಾಗಿ ಸ್ವತಂತ್ರ ಭಾರತದ ನಿರ್ಮಾಣದಲ್ಲಿ ಇಂದಿನವರು ಶ್ರಮಿಸಬೇಕು. ಸ್ವಾತಂತ್ರ್ಯ ಎನ್ನುವುದು ಅನುಪಮವಾದ, ಅಮೂಲ್ಯವಾದ ಜೀವರತ್ನ!





# ರಾಜ್ಯಮಟ್ಟದ ತರಬೇತಿ ಶಿಬಿರಗಳು

ಜೂನ್ 25 ರಿಂದ ಜುಲೈ 01 ರವರೆಗೆ ವಯಸ್ಕ ನಾಯಕರುಗಳಿಗೆ ರಾಜ್ಯಮಟ್ಟದ ತರಬೇತಿ ಶಿಬಿರಗಳನ್ನು ಡಾ॥ ಆನಿಬೆಸೆಂಟ್ ಸ್ಕೌಟ್ಸ್-ಗೈಡ್ಸ್ ರಾಜ್ಯ ತರಬೇತಿ ಕೇಂದ್ರ ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಏರ್ಪಡಿಸಲಾಗಿತ್ತು.



ಶಿಬಿರ: ರೋವರ್ ಸ್ಕೌಟ್ ಲೀಡರ್ ಮೂಲತರಬೇತಿ ಶಿಬಿರ
ನಾಯಕರು: ಎ.ಎನ್. ನರೇಂದ್ರಕುಮಾರ್, ಎಲ್.ಟಿ(ಆರ್)
ಎ.ವಿ. ರಾಜೇಶ್ ಅವಲಕ್ಕಿ, ಎ.ಎಲ್.ಟಿ(ಆರ್)
ಸಹಾಯಕರು: ಬಾಲಕೃಷ್ಣ, ಹೆಚ್.ಡಬ್ಲ್ಯೂ.ಬಿ(ಆರ್)
ಬೋರೇಗೌಡ, ಹೆಚ್.ಡಬ್ಲ್ಯೂ.ಬಿ(ಆರ್)



ಶಿಬಿರ: ರೇಂಜರ್ ಲೀಡರ್ ಮೂಲತರಬೇತಿ ಶಿಬಿರ
ನಾಯಕರು: ಶುಭ.ಎಸ್, ಎ.ಎಲ್.ಟಿ(ಆರ್)
ಸಹಾಯಕರು: ಶುಭ ವಿಶ್ವನಾಥ್, ಎಲ್.ಟಿ(ಗೈ)
ಡಾ॥ ಶಕುಂತಲಾ, ಹೆಚ್.ಡಬ್ಲ್ಯೂ.ಬಿ(ಆರ್)
ದೀಪಿಕ, ಶಶಿರೇಖಾ, ಅನ್ನಪೂರ್ಣ



ಶಿಬಿರ: ಕಬ್ ಮಾಸ್ಟರ್ ಮುಂದುವರೆದ ತರಬೇತಿ ಶಿಬಿರ
ನಾಯಕರು: ಸಂಧ್ಯಾರಾಣಿ, ಎಲ್.ಟಿ(ಸಿ)
ಆಂಜನೇಯ, ಎ.ಎಲ್.ಟಿ(ಸಿ)
ಯತೀಶ್, ಪ್ರೀ.ಎಲ್.ಟಿ(ಸಿ)
ಸಹಾಯಕರು: ಮಂಜುನಾಥ್, ಹೆಚ್.ಡಬ್ಲ್ಯೂ.ಬಿ(ಸಿ)
ಪಾಟೀಲ್, ಹೆಚ್.ಡಬ್ಲ್ಯೂ.ಬಿ(ಸಿ)



ಶಿಬಿರ: ಫ್ಲಾಕ್ ಲೀಡರ್ ಮೂಲತರಬೇತಿ ಶಿಬಿರ
ನಾಯಕರು: ಶಕುಂತಲಾ ಸಿ. ನರವಾಟೆ, ಎ.ಎಲ್.ಟಿ.(ಬಿ)
ಎನ್.ಕೆ. ಛಾಯ. ಎಲ್.ಟಿ.(ಗೈ)
ಸಹಾಯಕರು: ಗೀತಾ ಹೆಗಡೆ, ಎ.ಎಲ್.ಟಿ.(ಬಿ)

ಮೇಲ್ಕಂಡ ತರಬೇತಿ ಶಿಬಿರದ ನಾಯಕರುಗಳು ಎಸ್.ಓ.ಟಿ ಪ್ರಕಾರ 7 ದಿನಗಳವರೆಗೆ ಭಾಗವಹಿಸಿದ ಶಿಬಿರಾರ್ಥಿಗಳಿಗೆ ತರಬೇತಿಯನ್ನು ನೀಡಿರುತ್ತಾರೆ. ಈ ತರಬೇತಿ ಶಿಬಿರಕ್ಕೆ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯರವರು ಭೇಟಿ ನೀಡಿ ಶಿಬಿರಾರ್ಥಿಗಳನ್ನು ಉದ್ದೇಶಿಸಿ ಮಾತನಾಡಿದರು. 2019-20ನೇ ಸಾಲಿನ ಯೋಜನೆಯ ಬಗ್ಗೆ ವಿವರಿಸಿ ಮುಂದಿನ ದಿನಗಳಲ್ಲಿ ಕಬ್, ಬುಲ್-ಬುಲ್, ರೋವರ್-ರೇಂಜರ್ ತರಬೇತಿ ಶಿಬಿರಗಳಿಗೆ ಹೆಚ್ಚು ಹೆಚ್ಚಾಗಿ ಶಿಬಿರಾರ್ಥಿಗಳು ಬರುವಂತಹ ವ್ಯವಸ್ಥೆ ಮಾಡಬೇಕು. ಶಿಕ್ಷಣ ಕ್ಷೇತ್ರದಲ್ಲಿ ತಮ್ಮ ಪಾತ್ರ ಬಹಳ ಮೌಲ್ಯದಾರಿತವಾಗಿದೆ, ತಮ್ಮೆಲ್ಲರಿಗೂ ಒಳ್ಳೆಯದಾಗಲಿ ಎಂದು ಶುಭಹಾರೈಸಿದರು.



## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆಯಲ್ಲಿ ಹಿಮಾಲಯ ವೃಕ್ಷಮಣಿದಾರರಾಗಿ ಅರ್ಹತೆಯನ್ನು ಹೊಂದಿರುವವರಿಗೆ ಪ್ರಸ್ತುತ ನೀಡುತ್ತಿರುವ ಮಾಸಿಕ ಗೌರವಧನ ರೂ 75/- ರಿಂದ 150 ಕ್ಕೆ ಹೆಚ್ಚಿಸುವ ಬಗ್ಗೆ.

ಓದಲಾಗಿದೆ: 1) ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ಪತ್ರ ಸಂಖ್ಯೆ:BSG/SHQ/1703/2018-19, ದಿನಾಂಕ:26.09.2018

2) ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ದೈ.ಶಿ/ಹಿ.ವೃ.ಗೌ.ಧನ.ಹೆ.ಬ-53/2018-19, ದಿನಾಂಕ:12.10.2018

3) ಸರ್ಕಾರದ ಆದೇಶ ಸಂಖ್ಯೆ: ಇಡಿ 57 ಪಿಬಿಎಸ್ 99, ದಿನಾಂಕ:26.07.2000.

*****

ಪ್ರಸ್ತಾವನೆ:

ಓದಲಾಗಿದೆ (1)ರಲ್ಲಿ ನಿರ್ದೇಶಕರು ಪ್ರಾಥಮಿಕ ಶಿಕ್ಷಣ ಇವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯಲ್ಲಿ ಹಿಮಾಲಯ ವುಡ್ ಬ್ಯಾಡ್ಜ್ ಹೊಂದಿದ್ದು ಅವಿರತವಾಗಿ ಹತ್ತು ವರ್ಷಗಳ ಕಾಲ ಮತ್ತು ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಸೇವೆ ಸಲ್ಲಿಸುತ್ತಿರುವ ಅರ್ಹ ಶಿಕ್ಷಕರುಗಳಿಗೆ ಈಗಾಗಲೇ ನೀಡುತ್ತಿರುವ ಮಾಸಿಕ ರೂ.50.00 ಗಳ ಗೌರವ ಧನವನ್ನು ಮಾಸಿಕ ರೂ.75.00 ಗಳಿಗೆ ಹೆಚ್ಚಿಸಲು ಮಂಜೂರಾತಿ ನೀಡಿ ಆದೇಶಿಸಿದೆ. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯಲ್ಲಿ ಹಿಮಾಲಯ ವೃಕ್ಷಮಣಿದಾರರ ಅರ್ಹತೆಯನ್ನು ಹೊಂದಿದ್ದು, ಅವಿರತವಾಗಿ 10 ವರ್ಷಗಳ ಕಾಲ ಸ್ಕೌಟರ್/ಗೈಡರುಗಳಾಗಿ ಸತತವಾಗಿ ಸೇವೆ ಸಲ್ಲಿಸುತ್ತಿರುವ ಅರ್ಹ ಶಿಕ್ಷಕರುಗಳಿಗೆ ಮಾಸಿಕ ರೂ.75/- ರಿಂದ ರೂ.1000/-ಕ್ಕೆ ಗೌರವಧನವನ್ನು ಹೆಚ್ಚಿಸುವಂತೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಓದಲಾಗಿದೆ (2)ರಲ್ಲಿ ಆಯುಕ್ತರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆಯಲ್ಲಿ ಹಿಮಾಲಯ ವೃಕ್ಷಮಣಿದಾರರಾಗಿ ಕಾರ್ಯನಿರ್ವಹಿಸುತ್ತಿರುವ ಕಬ್ಸ್-ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್ ಮತ್ತು ಶಿಕ್ಷಕ ಶಿಕ್ಷಕಿಯರಿಗೆ ಪ್ರಸ್ತುತ ನೀಡುತ್ತಿರುವ ಮಾಸಿಕ ಗೌರವಧನ ರೂ.75.00 ರಿಂದ ರೂ.1000.00 ಕ್ಕೆ ಹೆಚ್ಚಿಸುವಂತೆ ಕೋರಿರುತ್ತಾರೆ.

ಓದಲಾಗಿದೆ (3)ರಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯಲ್ಲಿ ಹಿಮಾಲಯ ವುಡ್ ಬ್ಯಾಡ್ಜ್ ಹೊಂದಿದ್ದು ಅವಿರತವಾಗಿ ಹತ್ತು ವರ್ಷಗಳ ಕಾಲ ಮತ್ತು ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಸೇವೆ ಸಲ್ಲಿಸುತ್ತಿರುವ ಅರ್ಹ ಶಿಕ್ಷಕರುಗಳಿಗೆ ಈಗಾಗಲೇ ನೀಡುತ್ತಿರುವ ಮಾಸಿಕ ರೂ.50.00 ಗಳ ಗೌರವ ಧನವನ್ನು ಮಾಸಿಕ ರೂ.75.00ಗಳಿಗೆ ಹೆಚ್ಚಿಸಲು ಮಂಜೂರಾತಿ ನೀಡಿ ಆದೇಶಿಸಿದೆ.

ಈ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 270 ಯೋಸಕ 2018, ಬೆಂಗಳೂರು, ದಿನಾಂಕ: 28.06.2019**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಹಿಮಾಲಯ ವೃಕ್ಷಮಣಿದಾರರಿಗೆ ಕಬ್ಸ್, ಬುಲ್‌ಬುಲ್, ಸ್ಕೌಟ್ಸ್/ಗೈಡ್ಸ್, ಶಿಕ್ಷಕ/ಶಿಕ್ಷಕಿಯರಿಗೆ ನೀಡುತ್ತಿರುವ ಮಾಸಿಕ ರೂ.75/- ಗಳಿಂದ ರೂ.150/-ಗಳಿಗೆ ಪರಿಷ್ಕರಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 127 ವೆಚ್ಚ-8 2019, ದಿನಾಂಕ:07.03.2019ರಲ್ಲಿ ನೀಡಿದ ಸಹಮತಿಯ ಮೇಲೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ



(ಎಸ್.ಆರ್.ಎಸ್.ನಾಥನ್)
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ (ಯೋಜನೆ)
ಶಿಕ್ಷಣ ಇಲಾಖೆ (ಪ್ರಾಥಮಿಕ ಹಾಗೂ ಪ್ರೌಢ)

# The Challenge of Water

*India's Ability to Manage and Govern Water will Determine its Future*

- ***AMITABH KANT,*** **CEO, Niti Aayog, New Delhi**



Prime Minister Narendra Modi has outlined his vision of ensuring access to piped drinking water to every Indian household by 2024. A New Jal Shakti Ministry has been created to undertake this ambitious task. In his Mann ki Baat,the PM has appealed to all Indians to create awareness on water conservation and share knowledge of traditional water conservation. The Jal Shakti Scheme for enhancing conservation in water starved areas has been launched in 255 districts.

Water will determine India's ability to achieve high economic growth, ensure environmental sustainability and improve quality of life for citizens. India is home to 17% of the world's population but has only 4% of the world's fresh water resources. At present, 75% of Indian households do not have access to drinking water and close to 90% of rural households have no access to piped water.

India today is also the world's largest groundwater extractor, pumping out nearly 25% of the global groundwater usage annually. Five of the world's 20 largest cities under water stress are in India, with Delhi being second in the list. Over 20 million wells pumped water, with free power supply provided by state governments.

Rice and sugarcane, both water guzzling crops, have expanded in water scarce states consuming vast amount of irrigation water per hectare. Punjab is using three times more water to produce a kg of rice compared to Bihar, and more than twice compared to West Bengal. Almost 80% of water for irrigating paddy fields in Punjab is groundwater. India today exports more than 10 trillion litre of virtual water through export of basmati rice.

What does India need to do to meet its biggest challenge – the challenge of water?

First, we need to restore, conserve and augment all our existing local water bodies. Every panchayat has water bodies – rivers, ponds, lakes, tanks and wells. Telangana's Mission Kakatiya is an example where state water bodies restored 46,000 water tanks. The Vayalagam Tankfed Agricultural Development Programme by Dhan Foundation has played a key role in restoring and facilitating proper maintenance of tanks in south Indian states. These examples need to be replicated across states.

Second, we need to utilise advanced technology. Remote sensing and geographic information system can enable real time data on water and catalyse communities to conserve water resources. Every single water asset including borewell can be geo-tagged and groundwater levels monitored on an online platform. Andhra Pradesh has used technology to manage its resources leading to rise in groundwater levels. States also need to segregate agricultural power feeders so that electricity consumption, particularly for water extraction, can be measured and monitored. Gujarat has 100%

feeder segregation leading to major reduction in electricity consumption and effective water management.

Third, community management of water and formation of water users' association can lead to success at grassroots level. At Hiware Bazar village in Maharashtra the community initiated watershed management, banned digging of deep borewells and began water budgeting. It has moved away from water intensive crops like cotton and sugarcane. Its example inspired the state government to introduce water budgeting in over 5,000 water stressed villages.

Fourth, India needs to radically improve its farm water efficiency, presently amongst the lowest in the world. Our farmers use 3-5 times more water than Chinese, Israeli and American farmers for producing the same crop. Our farmers need to adopt cropping patterns based on agro-climatic zoning. In the drought-prone region of Bundelkhand mentha, which requires 18-22 rounds of irrigation, is cultivated. We need to educate our farmers and modify subsidies and MSPs to disincentivise farmers from growing water intensive crops. Procuring and providing MSP for millets (jwar, bajra, ragi) and pulses (urad, arhar, chana and moong) will enable better nutrition through midday meals and ICDS schemes and facilitate a shift towards low water consuming, high protein crops.

Fifth, a major cause for India's groundwater crisis is the legal framework that ties up water rights with land rights and allows landowners to extract unlimited groundwater. The example to follow is Maharashtra, which has controlled extraction of groundwater through legislation. The Maharashtra Groundwater Development and Management Rules mandate registration and prohibition of wells. Permission for digging new wells necessitate building a groundwater recharge structure alongside.

Sixth, there is an imperative for a rational and pragmatic policy for pricing water. There is great willingness to pay for regular supply of water, but huge political and administrative unwillingness to charge for water. This must change. Pricing of water will ensure adequate investment in water infrastructure.

Seventh, Singapore is a great example for Indian cities of reducing dependence on water from neighbouring Malaysia and ensuring universal, affordable, efficient and high quality water through reuse of waste water, building rainwater catchments, dual piping, desalination as well as water legislation, dynamic water pricing, public education, R&D.

Fortunately, there are several good things happening on ground. States have taken the initiative to implement schemes for water conservation and recharge. Jalyukt Shivar in Maharashtra, Mukhya Mantri Jal Swavalamban Abhiyan in Rajasthan, Mission Kakatiya in Telangana, Sujalam Sufalam in Gujarat are making a difference. Under Jalyukt Shivar water harvesting structures made nearly 11,000 villages drought free. It also resulted in groundwater table rise by 1.5-2m. Jabalpur, Indore and Gwalior corporations have granted rebate on property tax for rainwater harvesting facility. In Telangana nearly 17,000 minor irrigation tanks were restored, supplying collected rainwater to 19 lakh acres of agricultur al land. Niti Aayog has developed the composite water management index, which ranks states on water management and explains states' progress on 28 indicators relating to water management.

We need a water secure India. Our ability to manage and govern our water resources efficiently will determine our ability to grow and prosper.

The writer is CEO, Niti Aayog. Views are personal.

**Courtesy: The Times of India**
**4-7-2019**

# ಆಗಸ್ಟ್ ತಿಂಗಳಿನ ಕಾರ್ಯಕ್ರಮಗಳು

## ಧ್ಯೇಯ ವಾಕ್ಯ: ಸ್ವತಂತ್ರ ಭಾರತ ನಮ್ಮ ಸಂಪತ್ತು

| ಸ್ಥಳೀಯ ಮತ್ತು ಜಿಲ್ಲಾ ಸಂಸ್ಥೆಯ ಕಾರ್ಯಕ್ರಮಗಳು | | | | |
|---|---|---|---|---|
| ಕ್ರ.ಸಂ. | ಕಾರ್ಯಕ್ರಮದ ಹೆಸರು | ಇಂದ ಗೆ | ಸ್ಥಳ | ದಿನಗಳು |
| 1. | ಪ್ಯಾಟ್ರೋಲ್ ಲೀಡರ್ / ಪಟ್ಕ ನಾಯಕರ ತರಬೇತಿ ಶಿಬಿರ | ಆಗಸ್ಟ್ 2019 | ಸ್ಥಳೀಯ & ಜಿಲ್ಲಾ ಮಟ್ಟದಲ್ಲಿ | 3 |
| 2. | ಸ್ಕೌಟರ್–ಗೈಡರ್ ಸಮಾವೇಶ | ಆಗಸ್ಟ್ 2019 | ಸ್ಥಳೀಯ / ಜಿಲ್ಲಾ ಮಟ್ಟದಲ್ಲಿ | 1 |
| 3. | ರೋವರ್ – ರೇಂಜರ್ ಮೇಟ್ ತರಬೇತಿ ಶಿಬಿರ | ಆಗಸ್ಟ್ 2019 | ಜಿಲ್ಲಾ ಮಟ್ಟದಲ್ಲಿ | 3 |
| 4. | ಜಿಲ್ಲಾ ಸಂಸ್ಥೆಯ ಕಾರ್ಯಕಾರಿ ಸಮಿತಿ ಸಭೆ | ಆಗಸ್ಟ್/ ಸೆಪ್ಟೆಂಬರ್2019 | ಜಿಲ್ಲಾ ಮಟ್ಟದಲ್ಲಿ | 1 |
| 5. | ಪದಕಾರ್ಜನ ತರಬೇತಿ ಶಿಬಿರ (ಸ್ಕೌಟ್ಸ್ / ಗೈಡ್ಸ್) | ಆಗಸ್ಟ್ 2019 | ಜಿಲ್ಲಾ ಮಟ್ಟದಲ್ಲಿ | 3 |
| 6. | ಅಧ್ಯಯನ ವೃತ್ತ ಶಿಬಿರ (ಶಿಕ್ಷಕರುಗಳಿಗೆ) | ಆಗಸ್ಟ್ 2019 | ಜಿಲ್ಲಾ ಮಟ್ಟದಲ್ಲಿ | 1 |
| 7. | ಶಿಕ್ಷಕರಿಗೆ ವಿಶೇಷ ತರಬೇತಿ (ಮ್ಯಾಪಿಂಗ್–ಪಯೋನಿಯರಿಂಗ್ ಫಸ್ಟ್ ಏಡ್ ತರಬೇತಿ/ ಕ್ಯಾಂಪ್ ಕ್ರಾಫ್ಟ್) | ಆಗಸ್ಟ್ 2019 | ಜಿಲ್ಲಾ ಮಟ್ಟದಲ್ಲಿ | 3 |
| 8. | ಸ್ವಚ್ಛತಾ ಕಾರ್ಯಕ್ರಮ | ಆಗಸ್ಟ್ 2019 | ಜಿಲ್ಲಾ ಮಟ್ಟದಲ್ಲಿ | |
| 9. | ಸದ್ಭಾವನ ದಿನ<br>1. ಉಪನಿಷತ್ ಪಠಣ<br>2. ಸರ್ವಧರ್ಮ ಪ್ರಾರ್ಥನಾ ಸ್ಪರ್ಧೆ<br>3. ಸದ್ಭಾವನ ಪ್ರತಿಜ್ಞೆ | ಆಗಸ್ಟ್ 2019 | ಎಲ್ಲಾ ಹಂತಗಳಲ್ಲಿ | 1 |
| 10. | ಚತುರ್ಥ ಚರಣ್ ಕಬ್ಸ್, ಹೀರಕ್ ಪಂಖ್ ಬುಲ್‌ಬುಲ್ಸ್‌ಗಳಿಗೆ ಪರೀಕ್ಷಾ ಶಿಬಿರ | ಆಗಸ್ಟ್ 2019 | ಎಲ್ಲಾ ಜಿಲ್ಲಾ ಮಟ್ಟದಲ್ಲಿ | 3 |
| 11. | ಸ್ವಾತಂತ್ರ್ಯ ದಿನಾಚರಣೆ ಕಾರ್ಯಕ್ರಮದಲ್ಲಿ ಭಾಗವಹಿಸಲು ಪಥ ಸಂಚಲನ ತರಬೇತಿ | ಆಗಸ್ಟ್ 2019 | ಸ್ಥಳೀಯ & ಜಿಲ್ಲಾ ಮಟ್ಟದಲ್ಲಿ | |
| ರಾಜ್ಯ ಸಂಸ್ಥೆಯ ಬಾಲಕ ಮತ್ತು ಬಾಲಕಿಯರ ಕಾರ್ಯಕ್ರಮಗಳು | | | | |
| 1. | ರಾಜ್ಯ ಮಟ್ಟದಲ್ಲಿ ಎಸ್‌ಎಸ್‌ಎಲ್‌ಸಿ ಮತ್ತು ಪಿ.ಯು.ಸಿ ಟಾಪರ್ಸ್‌ಗಳಿಗೆ ಗೌರವ ಸಮಾರಂಭ | ಜುಲೈ/ ಆಗಸ್ಟ್ 2019 | ರಾಜ್ಯ ಕೇಂದ್ರ ಕಛೇರಿ ಬೆಂಗಳೂರು | 1 |
| 2. | 1. ಕಬ್ಸ್–ಬುಲ್‌ಬುಲ್ಸ್, ಸ್ಕೌಟ್ಸ್–ಗೈಡ್ಸ್‌ಗಳಿಗೆ ಗೀತಗಾಯನ ಸ್ಪರ್ಧೆ | ಆಗಸ್ಟ್ 2019 | ರಾಜ್ಯ ಮಟ್ಟದಲ್ಲಿ | 1 |





| | | | | |
|---|---|---|---|---|
| | 2. ರೋವರ್ಸ್ ರೇಂಜರ್ಸ್‌ಗಳಿಗೆ ಸಂಗೀತ ವಾದ್ಯಗಳ ನುಡಿಸುವ ಸ್ಪರ್ಧೆ | ಆಗಸ್ಟ್ 2019 | ರಾಜ್ಯ ಮಟ್ಟದಲ್ಲಿ | 1 |
| 3. | ಸ್ವಾತಂತ್ರ್ಯ ದಿನಾಚರಣೆಯ ಪ್ರಯುಕ್ತ ಮಾಣಿಕ್‌ಷಾ ಮೈದಾನದಲ್ಲಿ ಪಥಚಲನೆಯಲ್ಲಿ ಭಾಗವಹಿಸುವ ಸ್ಕೌಟ್ಸ್-ಗೈಡ್ಸ್‌ಗಳಿಗೆ ತರಬೇತಿ | 08 ರಿಂದ 15.08.2019 | ರಾಜ್ಯ ಕೇಂದ್ರ ಕಛೇರಿ ಬೆಂಗಳೂರು | 8 |
| 4 | ಸ್ಕೌಟ್ಸ್, ಗೈಡ್ಸ್, ರೋವರ್ಸ್, ರೇಂಜರ್ಸ್‌ಗಳಿಗೆ ವಿಪತ್ತು ನಿರ್ವಹಣೆ ಶಿಬಿರ | ಆಗಸ್ಟ್ 2019 | ಎಲ್ಲಾ ಜಿಲ್ಲೆಗಳಲ್ಲಿ | 5 |
| | ರಾಜ್ಯ ಸಂಸ್ಥೆಯ ವಯಸ್ಕ ನಾಯಕರ ಕಾರ್ಯಕ್ರಮಗಳು | | | |
| 1. | ಸಂಪನ್ಮೂಲ ವ್ಯಕ್ತಿಗಳಿಗೆ ಬ್ರಿಡ್ಜ್ ಶಿಬಿರ | ಆಗಸ್ಟ್ 2019 | ರಾಜ್ಯ ತರಬೇತಿ ಕೇಂದ್ರ ದೊಡ್ಡಬಳ್ಳಾಪುರ / ಕೊಂಡಜ್ಜಿ | 3 |
| 2. | ಹಿರಿಯ ಸ್ಕೌಟರ್ಸ್ ಮತ್ತು ಗೈಡರ್ಸ್‌ಗಳಿಗೆ ಸನ್ಮಾನ ಸಮಾರಂಭ | ಆಗಸ್ಟ್ 2019 | ರಾಜ್ಯ ಕೇಂದ್ರ ಕಛೇರಿ ಬೆಂಗಳೂರು | 1 |
| 3. | ಸ್ಕೌಟ್ ಮಾಸ್ಟರ್ಸ್ ಮತ್ತು ಗೈಡ್ ಕ್ಯಾಪ್ಟನ್ಸ್‌ಗಳಿಗೆ ಮುಂದುವರೆದ ತರಬೇತಿ | 24 ರಿಂದ 30.08.2019 | ರಾಜ್ಯ ತರಬೇತಿ ಕೇಂದ್ರ ದೊಡ್ಡಬಳ್ಳಾಪುರ | 7 |
| 4. | ರೋವರ್ ಸ್ಕೌಟ್ ಲೀಡರ್ಸ್ ಮತ್ತು ರೇಂಜರ್ ಲೀಡರ್ಸ್‌ಗಳಿಗೆ ಮುಂದುವರೆದ ತರಬೇತಿ | 24 ರಿಂದ 30.08.2019 | ರಾಜ್ಯ ತರಬೇತಿ ಕೇಂದ್ರ ದೊಡ್ಡಬಳ್ಳಾಪುರ | 7 |
| 5 | ವಿಶ್ವ ವಿದ್ಯಾಲಯಗಳ ರೋವರ್ ಸ್ಕೌಟ್ ಲೀಡರ್ಸ್ ಮತ್ತು ರೇಂಜರ್ ಲೀಡರ್ಸ್‌ಗಳಿಗೆ ಮೂಲ ತರಬೇತಿ | ನಿಗದಿಪಡಿಸಲಾಗುವುದು | ಕಲಬುರ್ಗಿ-ಮಂಗಳೂರು<br>ಧಾರವಾಡ-ಮೈಸೂರು<br>ಕುವೆಂಪು ವಿಶ್ವವಿದ್ಯಾಲಯ<br>ಬೆಂಗಳೂರು | 7<br>7<br>7<br>7 |
| 6. | ಸ್ಕೌಟ್ ಮಾಸ್ಟರ್ಸ್ ಮತ್ತು ಗೈಡ್ ಕ್ಯಾಪ್ಟನ್ಸ್‌ಗಳಿಗೆ ಮೂಲ ತರಬೇತಿ ಶಿಬಿರ-ಮೂರಾರ್ಜಿ ದೇಸಾಯಿ/ ಏಕಲವ್ಯ/ಕಿತ್ತೂರ ರಾಣಿ ಚೆನ್ನಮ್ಮ/ ಅಟಲ್ ಬಿಹಾರಿ ವಾಜಪೇಯಿ ವಸತಿ ಶಾಲೆಗಳು | ಜುಲೈ/ ಆಗಸ್ಟ್ 2019 | ನಿಗದಿಪಡಿಸಲಾಗುವುದು | 7 |
| 7. | ವೃಕ್ಷಮಣಿಧಾರಕರ ಸಭೆ ಸ್ಕೌಟ್-ಗೈಡ್ ವಿಭಾಗ 2019 | ಆಗಸ್ಟ್ ಸೆಪ್ಟೆಂಬರ್ | ಆರ್.ಎಸ್.ವಿ.ಕೆ ಮರಳವಾಡಿ ಕನಕಪುರ ತಾ॥, ರಾಮನಗರ ಜಿ. | 3 |
| | ರಾಷ್ಟ್ರೀಯ ಸಂಸ್ಥೆಯ ಕಾರ್ಯಕ್ರಮಗಳು | | | |
| 1. | ವಿಶ್ವ ಸ್ಕಾರ್ಫ್ ದಿನ | 01.08.2019 | ಭಾರತದೆಲ್ಲೆಡೆ | 1 |
| 2. | ಸ್ವಾತಂತ್ರ್ಯ ದಿನಾಚರಣೆ | 15.08.2019 | ಭಾರತದೆಲ್ಲೆಡೆ | 1 |
| 3. | ಸದ್ಭಾವನ ದಿನ | 20.08.2019 | ಭಾರತದೆಲ್ಲೆಡೆ | 1 |
| | ರಾಷ್ಟ್ರೀಯ ತರಬೇತಿ ಮತ್ತು ಸಾಹಸ ಚಟುವಟಿಕೆಗಳ ಕೇಂದ್ರ, ಪಚಮರಿ, ಮಧ್ಯಪ್ರದೇಶ | | | |
| 1. | ರಾಷ್ಟ್ರೀಯ ಮಟ್ಟದ ಕಾರ್ಯಗಾರ (ವಯಸ್ಕ ನಾಯಕರಿಗೆ ಸ್ಕೌಟಿಂಗ್ ನಿಯಮ) | 27 ರಿಂದ 31.08.2019 | ಎನ್‌ಟಿಸಿ, ಪಚ್‌ಮರಿ | 5 |




**ಬೀದರ್ ಕೋಟೆ**

ಬೀದರ್ ಕೋಟೆ ಕರ್ನಾಟಕದ ದಕ್ಷಿಣ ಪ್ರಸ್ಥಭೂಮಿಯ ಬೀದರ್ ನಗರದಲ್ಲಿದೆ. ಬಹುಮನಿ ಮನೆತನದ ಸುಲ್ತಾನ್ ಅಲ್-ಉದ್-ದಿನ್ ಬಹಮನ್ ಗುಲ್ಬರ್ಗಾದಿಂದ ಬೀದರ್‌ಗೆ ತನ್ನ ರಾಜಧಾನಿಯನ್ನು 1427ರಲ್ಲಿ ವರ್ಗಾಯಿಸಿಕೊಂಡು ಈ ಕೋಟೆಯನ್ನು ಮತ್ತು ಇತರೆ ಇಸ್ಲಾಮಿಕ್ ಸ್ಮಾರಕಗಳನ್ನೂ ಕಟ್ಟಿಸಿದ.

## ಬಳ್ಳಾರಿ

ಜುಲೈ 12 ರಂದು ನಡೆದ ಒಂದು ದಿನದ ತಾಲ್ಲೂಕು ಮಟ್ಟದ ಸ್ಕೌಟ್ಸ್-ಗೈಡ್ಸ್ ಸಮಾವೇಶದಲ್ಲಿ 13 ಕಬ್ ಮಾಸ್ಟರ್ಸ್, 3 ಫ್ಲಾಕ್ ಲೀಡರ್ಸ್, 23 ಗೈಡ್ ಕ್ಯಾಪ್ಟನ್ಸ್ ಮತ್ತು 39 ಸ್ಕೌಟ್ ಮಾಸ್ಟರ್ಸ್ ಭಾಗವಹಿಸಿದ್ದರು. ಕಾರ್ಯಕ್ರಮವನ್ನು ಕ್ಷೇತ್ರ ಸಮನ್ವಯಾಧಿಕಾರಿಗಳಾದ ಶ್ರೀ ಜಮೀಲ್ ಅಹಮದ್ ಉದ್ಘಾಟಿಸಿದರು. ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಎಂ. ನಾಗರಾಜ ಪ್ರಾಸ್ತಾವಿಕವಾಗಿ ಮಾತನಾಡಿದರು. ಕ.ರಾ.ನೌ.ಸಂಘ ತಾಲ್ಲೂಕು ಘಟಕದ ಅಧ್ಯಕ್ಷರಾದ ಶ್ರೀ ಪಿ. ಶಿವರಾಜ ಅಧ್ಯಕ್ಷತೆ ವಹಿಸಿದ್ದರು. ಕಾರ್ಯದರ್ಶಿ ಶ್ರೀ ಟಿ. ತಿಂದಪ್ಪ ಸ್ವಾಗತಿಸಿದರು. ಶ್ರೀ ಮಹೇಶ್ ನಿರೂಪಿಸಿದರು. ರಾಜ್ಯ ಪ್ರತಿನಿಧಿ ಶ್ರೀ ಶಿವಪುತ್ರಸ್ವಾಮಿ ವರದಿ ಮಂಡಿಸಿದರು. ಖಜಾಂಚಿ ಶ್ರೀ ಮಹಾಲಿಂಗಕುಮಾರ, ಸಹಕಾರ್ಯದರ್ಶಿ ಶ್ರೀ ಎಂ. ಮಂಜುನಾಥ ವಂದನಾರ್ಪಣೆ ಮಾಡಿದರು.



* ಬಳ್ಳಾರಿ ಜಿಲ್ಲೆಯ ಸಂಡೂರು ತಾಲೂಕಿನ ಜಿಂದಾಲ್ ಆದರ್ಶ ವಿದ್ಯಾಲಯ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು ಪರಿಸರ ದಿನಾಚರಣೆಯ ಅಂಗವಾಗಿ ಒಂದು ಲಕ್ಷದ ಐವತ್ತು ಸಾವಿರ (150000) ಬೀಜದುಂಡೆಗಳನ್ನು ತಯಾರಿಸಿದ್ದಾರೆ. ಈ ಕಾರ್ಯಕ್ರಮದಲ್ಲಿ ಸಂಡೂರು ಉತ್ತರ ವಲಯದ ವಲಯ ಅರಣ್ಯಾಧಿಕಾರಿಗಳಾದ ಶ್ರೀ ಸೈಯದ್ ದಾದಾ ಕಲಂದರ್, ಉಪವಲಯ ಅರಣ್ಯಾಧಿಕಾರಿಗಳಾದ ಶ್ರೀ ರವಿ. ಎಂ., ಪಟ್ಟಣ ಪಂಚಾಯತಿಯ ಮುಖ್ಯಾಧಿಕಾರಿ ಶ್ರೀ ಅಬ್ದುಲ್ ರೆಹಮಾನ್, ಪ್ರಾಕೃತಿಕ ಅಭಿಯಂತರರಾದ ಶ್ರೀ ಎಂ. ಹರ್ಷವರ್ಧನ, ಕಂದಾಯ ಅಧಿಕಾರಿಗಳಾದ ಶ್ರೀ ಪಾಂಡುರಂಗ ಇಟಗಿ, ಸ್ಕೌಟ್ ಮಾಸ್ಟರ್ ಶ್ರೀ ಎಂ. ರವಿ, ಶ್ರೀ ಶ್ರೀಧರ್, ಗೈಡ್ ಕ್ಯಾಪ್ಟನ್ ಶ್ರೀಮತಿ ಪದ್ಮಾವತಿ, ವಿದ್ಯಾಲಯದ ಪ್ರಾಂಶುಪಾಲರಾದ ಡಾ॥ ಥಾಮಸ್ ರಮಿಜಿಯಸ್, ಉಪ ಪ್ರಾಂಶುಪಾಲರಾದ ಶ್ರೀ ಎನ್. ಕೊಟ್ರೇಶ್ವರ, ಮುಖ್ಯ ಸಮನ್ವಯಾಧಿಕಾರಿ ಶ್ರೀಮತಿ ಸಿ. ಅಂಬಿಕಾ ಭಾಗವಹಿಸಿದ್ದರು.

## ಬೆಳಗಾವಿ

ಜೂನ್ 28 ಮತ್ತು 29ರಂದು ಗೋಕಾಕ್ ನಗರದ ಕೆ.ಎಲ್.ಇ. ಮಹಾದೇವಪ್ಪಣ್ಣಾ ಮುನವಳ್ಳಿ ಶಾಲೆಯ ಆವರಣದಲ್ಲಿ ಜರುಗಿದ ಜಿಲ್ಲಾಮಟ್ಟದ ಸಾಹಿತ್ಯ ಸಮ್ಮೇಳನದಲ್ಲಿ ಶಾಲೆಯ ಸ್ಕೌಟ್-ಗೈಡ್‌ಗಳು ಭಾಗವಹಿಸಿದ್ದರು. ಸಾಹಿತ್ಯ ಸಮ್ಮೇಳನದಲ್ಲಿ ಸಾಹಿತ್ಯಾಸಕ್ತರಿಗೆ ಊಟ ಬಡಿಸುವ, ನೀರು ಕೊಡುವ, ಆವರಣವನ್ನು ಶುಚಿಗೊಳಿಸುವ, ವೇದಿಕೆಯನ್ನು ಸಿದ್ಧಪಡಿಸುವ ಈ ಮುಂತಾದ ಸೇವಾ ಕಾರ್ಯಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡರು. ಈ ಸಂದರ್ಭದಲ್ಲಿ ಸ್ಕೌಟ್ ಮಾಸ್ಟರ್ ಶ್ರೀ ಪಿ.ವೈ. ಪಾಟೀಲ, ಗೈಡ್ ಕ್ಯಾಪ್ಟನ್ ಶ್ರೀಮತಿ ಸುಜಾತಾ ತೊಂಡಿಕಟ್ಟಿ ಹಾಗೂ ಹಾಗೂ ಫ್ಲಾಕ್ ಲೀಡರ್ ಶ್ರೀಮತಿ ನಂದಾದೀಪಾ ಶಿರಾಳಕರ್ ಶಾಲಾ ಪ್ರಾಚಾರ್ಯರಾದ ಶ್ರೀಮತಿ ಅನುಪಾ ಕೌಶಿಕ್ ಉಪಸ್ಥಿತರಿದ್ದರು.



## ಬೆಂಗಳೂರು ಉತ್ತರ

Shivajinagar Local Association is Organised Releasing book cum Annual Council Meeting. On June 21st at Stracey Memorial School. Chief Guest was Mrs. Prabha Alexander, BEO and Sri D. Venkatesh, ASC & Others are seen. The Programme was Co-ordinated by Smt. B. Revathy, LT(B) Co-ordinator, Shivajinagar Local Association.



## ಬೆಂಗಳೂರು ದಕ್ಷಿಣ

ಜೂನ್ 21 ರಂದು ಬೆಂಗಳೂರು ದಕ್ಷಿಣ ಜಿಲ್ಲಾ ಸಂಸ್ಥೆಯ ವತಿಯಿಂದ ಅಂತರಾಷ್ಟ್ರೀಯ ಯೋಗ ದಿನಾಚರಣೆಯ ಅಂಗವಾಗಿ ರಾಜ್ಯ ಕೇಂದ್ರ ಕಛೇರಿ ಶಾಂತಿಗೃಹದ ಆವರಣದಲ್ಲಿ ಬೆಳಿಗ್ಗೆ 8 ರಿಂದ 9 ಗಂಟೆಯವರೆಗೆ ಶ್ರೀ ಸುಧೀಂದ್ರ ರವರ ನೇತೃತ್ವದಲ್ಲಿ ಯೋಗಾಭ್ಯಾಸ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ಈ ಕಾರ್ಯಕ್ರಮದಲ್ಲಿ ಶ್ರೀ ಎಂ. ಪ್ರಭಾಕರ್ ಭಟ್, ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್), ಶ್ರೀ ಅನಂತ್, ಬಿ.ಎಸ್. ಜಿಲ್ಲಾ ಸಹಾಯಕ ಕಾರ್ಯದರ್ಶಿ ಶ್ರೀ ಟಿ. ಸಿದ್ಧಗಂಗಯ್ಯ ಜಿಲ್ಲಾ ಪದಕ ಕಾರ್ಯದರ್ಶಿ, ಶ್ರೀ ಪಿ. ಚಂದ್ರು, ಜಿಲ್ಲಾ ಸಂಘಟಕರು ಹಾಗೂ ವಿವಿಧ ಶಾಲೆಗಳಿಂದ ಆಗಮಿಸಿದ 115 ಸ್ಕೌಟ್ಸ್-ಗೈಡ್ಸ್, ಸ್ಕೌಟ್ ಮಾಸ್ಟರ್, ಗೈಡ್ ಕ್ಯಾಪ್ಟನ್‌ಗಳು ಭಾಗವಹಿಸಿದ್ದರು.



* ಜೂನ್ 21ರಂದು ಬೆಂಗಳೂರು ದಕ್ಷಿಣ ಜಿಲ್ಲಾ ಸಂಸ್ಥೆಯ ವತಿಯಿಂದ ಶ್ರೀ ಕೊಂಡಜ್ಜಿ ಬಸಪ್ಪ ಸಭಾಂಗಣದಲ್ಲಿ 2019-20ನೇ ಸಾಲಿನ ವಾರ್ಷಿಕ ಯೋಜನಾ ಪುಸ್ತಕದ ಬಿಡುಗಡೆಯ ಸಮಾರಂಭವನ್ನು ಆಯೋಜಿಸಲಾಗಿತ್ತು. ಈ ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಯಾಗಿ ಆಗಮಿಸಿದ ಶ್ರೀ ಪಿ.ಜಿ.ಆರ್. ಸಿಂಧ್ಯಾ, ರಾಜ್ಯ ಮುಖ್ಯ ಆಯುಕ್ತರು ಪುಸ್ತಕ ಬಿಡುಗಡೆ ಕಾರ್ಯಕ್ರಮವನ್ನು ನೆರವೇರಿಸಿಕೊಟ್ಟರು. ನಂತರ ಶ್ರೀ ಕೆ. ಗಂಗಪ್ಪ ಗೌಡ, ರಾಜ್ಯ ಕಾರ್ಯದರ್ಶಿ 2019-20ನೇ ಸಾಲಿನ ವಾರ್ಷಿಕ ಯೋಜನಾ ಪುಸ್ತಕದ ಬಗ್ಗೆ ವಿವರಿಸಿದರು. ಈ ಕಾರ್ಯಕ್ರಮದಲ್ಲಿ ರಾಜ್ಯ ಸಹಾಯಕ ಕಾರ್ಯದರ್ಶಿ ಶ್ರೀ ಎಲ್.ಟಿ. ಲೋಕೇಶ್, ಶ್ರೀ ಎಂ. ಪ್ರಭಾಕರ್ ಭಟ್, ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್) ಶ್ರೀ ಪಿ. ಪಳನಿ, ಜಿಲ್ಲಾ ಆಯುಕ್ತರು(ಸ್ಕೌಟ್ಸ್), ಶ್ರೀ ಎಮ್.ಎಸ್. ಸತೀಶ್, ಜಿಲ್ಲಾ ಕಾರ್ಯದರ್ಶಿ, ಶ್ರೀಮತಿ ವಿಕ್ಟೋರಿಯಾ, ಜಿಲ್ಲಾ ಜಂಟಿ ಕಾರ್ಯದರ್ಶಿ ಶ್ರೀ ಬಿ.ಎಸ್. ಅನಂತ್, ಜಿಲ್ಲಾ ಸಹಾಯಕ ಕಾರ್ಯದರ್ಶಿ ಶ್ರೀ ಸಿದ್ಧಗಂಗಯ್ಯ, ಜಿಲ್ಲಾ ಪದಕ ಕಾರ್ಯದರ್ಶಿ ಶ್ರೀ ಬಿ.ವಿ. ಶೇಖರ್, ಬಸವನಗುಡಿ ಸ್ಥಳೀಯ ಸಂಸ್ಥೆ, ಕಾರ್ಯದರ್ಶಿ, ಶ್ರೀಮತಿ ಉಷ ದಾಮೋಧರನ್ ಹಾಗೂ ಶ್ರೀ ಪಿ. ಚಂದ್ರು, ಜಿಲ್ಲಾ ಸಂಘಟಕರು ಉಪಸ್ಥಿತರಿದ್ದರು.

## ಬಾಗಲಕೋಟೆ

ಜೂನ್ 6 ರಂದು ವಿಶ್ವ ಪರಿಸರ ದಿನಾಚರಣೆಯನ್ನು ಆಚರಣೆ ಮಾಡಲಾಯಿತು. ಜಿಲ್ಲಾ ಸಂಸ್ಥೆ ನಿವೇಶನದಲ್ಲಿ ಅರಣ್ಯ ಇಲಾಖೆಯೊಂದಿಗೆ ಜಿಲ್ಲಾ ಪದಾಧಿಕಾರಿಗಳ ಜೊತೆಗೂಡಿ ಸಸಿಗಳನ್ನು ನೆಡಲಾಯಿತು. ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಚಂದ್ರಶೇಖರ ಸಾವಳಗಿ ಪರಿಸರ ದಿನಾಚರಣೆ ಕುರಿತು ಸಂದೇಶ ನೀಡಿದರು. ಸ್ಥಳೀಯ ಹಾಗೂ ಜಿಲ್ಲಾ ಪದಾಧಿಕಾರಿಗಳು ಪರಿಸರ ದಿನಾಚರಣೆಯಲ್ಲಿ ಭಾಗವಹಿಸಿದ್ದರು.

* ಜೂನ್ 15 ರಿಂದ 22ರ ವರೆಗೆ ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದ ಸಂಸ್ಥೆ ಹಾಗೂ ಅರಣ್ಯ ಇಲಾಖೆಯ



ಸಹಯೋಗದೊಂದಿಗೆ 7 ದಿನಗಳ ಕಾಲ ನಿರಂತರ ಬೀಜದ ಉಂಡೆಗಳನ್ನು ತಯಾರಿಕೆ ಮಾಡಲಾಯಿತು. ಅರಣ್ಯ ಇಲಾಖೆಯ ಅಧಿಕಾರಿಗಳಾದ ಶ್ರೀ ಪಿ.ಎಸ್. ಖೇಡಗಿ, ಶ್ರೀ ಪ್ರಶಾಂತ ಇ.ಟಿ., ಶ್ರೀ ಅನಿಲ ರಾಠೋಡರವರು ಕಾರ್ಯಕ್ರಮಕ್ಕೆ ಸಹಕಾರ ನೀಡಿದರು. ಜಿಲ್ಲಾ ಪದಾಧಿಕಾರಿಗಳು ಬಾಗಲಕೋಟೆ ತಾಲ್ಲೂಕು ಪದಾಧಿಕಾರಿಗಳು ಬೀಜದುಂಡೆ ತಯಾರಿಕೆಯಲ್ಲಿ ಭಾಗವಹಿಸಿದರು. ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಚಂದ್ರಶೇಖರ ಸಾವಳಗಿ ರವರು ಬೀಜದ ಉಂಡೆಯ ಮಹತ್ವ ತಿಳಿಹೇಳಿದರು.

* ಜೂನ್ 21ರಂದು ಜಿಲ್ಲಾ ಕ್ರೀಡಾಂಗಣ ನವನಗರದಲ್ಲಿ ವಿವಿಧ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು, ಇಲಾಖೆಯ ಅಧಿಕಾರಿಗಳು ಮತ್ತು ಜಿಲ್ಲಾ ಪದಾಧಿಕಾರಿಗಳ ಜೊತೆಯಲ್ಲಿ ಸಕ್ರಿಯವಾಗಿ ಯೋಗ ದಿನಾಚರಣೆಯನ್ನು ಮಾಡಲಾಯಿತು.

ಶ್ರೀ ಚಂದ್ರಶೇಖರ್ ಸಾವಳಗಿ ಜಿಲ್ಲಾ ಕಾರ್ಯದರ್ಶಿ ಅವರು ಮಾನ್ಯ ಜಿಲ್ಲಾಧಿಕಾರಿಗಳನ್ನು ಕಂಠವಸ್ತ್ರ ಧರಿಸುವುದರೊಂದಿಗೆ ಸ್ವಾಗತಿಸಿದರು. 2019-20ನೇ ಸಾಲಿನ ಯೋಜನಾ ಪುಸ್ತಕವನ್ನು ಮಾನ್ಯ ಜಿಲ್ಲಾಧಿಕಾರಿಗಳಾದ ಶ್ರೀ ಆರ್. ರಾಮಚಂದ್ರನ್ ರವರು ಬಿಡುಗಡೆ ಮಾಡಿದರು. ಜಿಲ್ಲೆಯ ಪದಾಧಿಕಾರಿಗಳು ಭಾಗವಹಿಸಿದ್ದರು.

* ಜಿಲ್ಲಾ ಮಟ್ಟ ಮತ್ತು ತಾಲ್ಲೂಕು ಮಟ್ಟದ ಶಾಲಾ ಮುಖ್ಯಗುರುಗಳ ಸ್ಕೌಟ್ಸ್-ಗೈಡ್ಸ್ ಮಾಹಿತಿ ಶಿಬಿರ ಮತ್ತು 2019-20ನೇ ಸಾಲಿನ ಯೋಜನಾ ಪುಸ್ತಕ ಬಿಡುಗಡೆ ಕಾರ್ಯಕ್ರಮ ಸರಕಾರಿ ಬಾಲಕಿಯರ ಪ್ರೌಢಶಾಲೆ ಬಾಗಲಕೋಟದಲ್ಲಿ ಜರುಗಿತು. ಕಾರ್ಯಕ್ರಮದಲ್ಲಿ ಜಿಲ್ಲಾ ಉಪನಿರ್ದೇಶಕರಾದ ಶ್ರೀ ಬಿ.ಎಚ್. ಗೋನಾಳ, ಬಾಗಲಕೋಟೆ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ದೊಡ್ಡಬಸಪ್ಪಾ ನೀರಲಕೇರಿ ಜಿಲ್ಲಾ ಕಾರ್ಯದರ್ಶಿ ಶ್ರೀ ಚಂದ್ರಶೇಖರ ಸಾವಳಗಿ ಮತ್ತು ಶ್ರೀ ಕೆ.ಆರ್. ದೇಶಪಾಂಡೆ, ಡಿ.ಸಿ.(ಎಸ್.) ಶ್ರೀಮತಿ ಜಯಮ್ಮ ಅಬ್ಬುಲಪುರ, ಡಿ.ಸಿ.(ಜಿ.) ಬಾಗಲಕೋಟೆ ತಾಲ್ಲೂಕು ಕಾರ್ಯದರ್ಶಿ ಶ್ರೀ ಎಸ್.ಎಸ್. ದಳವಾಯಿ ಹಾಗೂ ಇಲಾಖೆಯ ಪದಾಧಿಕಾರಿಗಳು ಭಾಗವಹಿಸಿದ್ದರು.

ಜಿಲ್ಲಾ ಸ್ಕೌಟ್ ಪ್ರತಿನಿಧಿ ಶ್ರೀ ಎಸ್.ಎಸ್. ನಾರಾ ರವರು ಮುಖ್ಯ ಗುರುಗಳಿಗೆ ಸ್ಕೌಟಿಂಗ್-ಗೈಡಿಂಗ್ ಮಾಹಿತಿಯನ್ನು ತಿಳಿಸಿದರು. ಶ್ರೀಮತಿ ಪದ್ಮಾ ಬಂಧಿಕೇರಿ ಕಾರ್ಯಕ್ರಮ ನಿರೂಪಣೆ ಮಾಡಿದರು. ಉಪನಿರ್ದೇಶಕರು ಪ್ರತಿ ಶಾಲೆಯಲ್ಲಿ ಘಟಕಗಳನ್ನು ರಚಿಸುವುದು ಕಡ್ಡಾಯ ಹಾಗು ಚಳುವಳಿಯ ಕುರಿತು ಹೆಚ್ಚಿನ ರೀತಿಯಲ್ಲಿ ಶಿಕ್ಷಕರು ಭಾಗವಹಿಸಲು ತಿಳಿಸಿದರು.



## ಚಾಮರಾಜನಗರ

ಜೂನ್ 30ರಂದು ಚಾಮರಾಜನಗರ ಸ್ಥಳೀಯ ಸಂಸ್ಥೆ, ಯಳಂದೂರು ಮತ್ತು ಯುವಬ್ರಿಗೇಡ್ ಯಳಂದೂರು, ಜೈಹಿಂದ್ ಓಪನ್ ಸ್ಕೌಟ್ ಗ್ರೂಪ್ ಚಾಮರಾಜನಗರ ಮತ್ತು ಹಸಿರು ಯುವಪಡೆ ಕಂದಹಳ್ಳಿ ಇವರ ನೇತೃತ್ವದಲ್ಲಿ "ಉಸಿರಿಗಾಗಿ ಗಿಡ ನೆಡುವ ಕಾರ್ಯಕ್ರಮ"ವನ್ನು ಗಣಿಗನುರು ಗ್ರಾಮದ ಶ್ರೀ ನೀಲಕಂಠೇಶ್ವರ ಸ್ವಾಮಿ ದೇವಸ್ಥಾನದ ಆವರಣದಲ್ಲಿ ಆಯೋಜಿಸಲಾಗಿತ್ತು. ದೇವಸ್ಥಾನದ ಅರ್ಚಕರಾದ ಶ್ರೀ ಪುಟ್ಟಮಲ್ಲಪ್ಪರವರು ಗಿಡ ನೆಡುವುದರ ಮೂಲಕ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ನಂತರ ಮುಂದಿನ ಪೀಳಿಗೆಗೆ ಪರಿಸರ ಸಂರಕ್ಷಣೆ ಬಹಳ ಅಗತ್ಯವಿದೆ. ಆದ್ದರಿಂದ ಹೆಚ್ಚಾಗಿ ಗಿಡಗಳನ್ನು ನೆಡುವುದು ಮತ್ತು ಸಂರಕ್ಷಣೆ ಮಾಡುವುದರಲ್ಲಿ ಯುವ ಜನತೆ ಪಾತ್ರ ಬಹಳ ಮುಖ್ಯವಾಗಿದೆ ಎಂದು ಕರೆ ನೀಡಿದರು. ಯುವ ಬಿಗ್ರೇಡ್‌ನ ಜಿಲ್ಲಾ ಸಂಚಾಲಕರಾದ ಶ್ರೀ ರಘು, ಶ್ರೀ ಚಿನ್ನಸ್ವಾಮಿ, ಶ್ರೀ ರಾಜಣ್ಣ ಶ್ರೀ ಕುಮಾರ್, ಹಸಿರು ಪಡೆಯ ಸದಸ್ಯರಾದ ಶ್ರೀ ಸುನೀಲ್, ಶ್ರೀ ಮೂರ್ತಿ ಮತ್ತು ರೋವರ್ ಸ್ಕೌಟ್ ಲೀಡರ್ ಪ್ರದೀಪ್ ಎಸ್. ರವರು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

* ಜುಲೈ 3ರಂದು ಯಳಂದೂರು ಸ್ಥಳೀಯ ಸಂಸ್ಥೆಯ ಕಛೇರಿಯಲ್ಲಿ ಸ್ಥಳೀಯ ಮಟ್ಟದ ಸ್ಕೌಟರ್ಸ್ ಮತ್ತು ಗೈಡರ್ಸ್ ಸಮಾವೇಶ ಆಯೋಜಿಸಲಾಗಿತ್ತು. ಈ ಸಮಾವೇಶದಲ್ಲಿ ಯಳಂದೂರು ಕ್ಷೇತ್ರ ಶಿಕ್ಷಣಾಧಿಕಾರಿಗಳು ಮತ್ತು ಸಮನ್ವಯ ಸಂಪನ್ಮೂಲ ಅಧಿಕಾರಿಗಳ ಸಮ್ಮುಖದಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್‌ನ 2019-20ನೇ ಸಾಲಿನ ವಾರ್ಷಿಕ ಕ್ರಿಯಾ ಯೋಜನಾ ಪುಸ್ತಕವನ್ನು ಬಿಡುಗಡೆಗೊಳಿಸಲಾಯಿತು. ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ತಿರುಮಲಾಚಾರ್ ರವರು ಸ್ಥಳೀಯ ಮಟ್ಟದಲ್ಲಿ ಸ್ಕೌಟ್ಸ್-ಗೈಡ್ಸ್‌ನ ಚಟುವಟಿಕೆಗಳು ಇನ್ನೂ ಹೆಚ್ಚಿನ ಮಟ್ಟದಲ್ಲಿ ಆಗಬೇಕು. ಇದಕ್ಕೆ ಸಂಬಂಧಪಟ್ಟಂತೆ ತಾಲ್ಲೂಕಿನ ಶಿಕ್ಷಕ ಮತ್ತು ಶಿಕ್ಷಕಿಯರನ್ನು ಸ್ಕೌಟ್ಸ್-ಗೈಡ್ಸ್ ತರಬೇತಿಗೆ ನಿಯೋಜಿಸುವುದಾಗಿ ಭರವಸೆ ನೀಡಿದರು. ಸಮನ್ವಯ ಸಂಪನ್ಮೂಲ ಅಧಿಕಾರಿಗಳಾದ ಶ್ರೀ ಮಹೇಶ್ ಕುಮಾರ್ ರವರು ಪ್ರತಿಯೊಂದು ಶಾಲೆಯಲ್ಲಿಯೂ ಸಹ ಸ್ಕೌಟ್ಸ್-ಗೈಡ್ಸ್ ಘಟಕವನ್ನು ಸ್ಥಾಪಿಸಬೇಕು ಮತ್ತು ಇವರ



ಉಪಯೋಗವನ್ನು ಪ್ರತಿಯೊಬ್ಬರು ಪಡೆದುಕೊಳ್ಳಬೇಕು ಎಂದು ಸಲಹೆ ನೀಡಿದರು. ಬಿ.ಆರ್.ಸಿ. ಶ್ರೀ ಸ್ವಾಮಿ ಪೊನ್ನಾಚಿ, ಶ್ರೀ ರವಿಕುಮಾರ್, ಬಿ.ಆರ್.ಪಿ. ಶ್ರೀಮತಿ ರಾಧ. ಡಿ. ಜಿಲ್ಲಾ ಕಾರ್ಯದರ್ಶಿ ಶ್ರೀ ವಿ.ಎಂ. ರಾಮಚಂದ್ರ ಜಿಲ್ಲಾ ಸಂಘಟಕರು ಶ್ರೀ ಕೆ.ಪಿ. ಅಶೋಕ್ ಕುಮಾರ್, ಸ್ಥಳೀಯ ಸಂಸ್ಥೆಯ ಜಂಟಿ ಕಾರ್ಯದರ್ಶಿ ಶ್ರೀ ಎಸ್. ಸಂಜೀವಮೂರ್ತಿ, ತಾಲ್ಲೂಕಿನಿಂದ 30 ಸ್ಕೌಟ್ಸ್-ಗೈಡ್ಸ್ ಶಿಕ್ಷಕರು, ರೋವರ್ಸ್‌ಗಳು ಹಾಗೂ ಜಿಲ್ಲಾ ಮತ್ತು ತಾಲ್ಲೂಕು ಯುವಘಟಕದ ಅಧ್ಯಕ್ಷರಾದ ಶ್ರೀ ಎಸ್. ಪ್ರದೀಪ್ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

* ಜುಲೈ 12 ರಂದು ಜಿಲ್ಲಾ ಸಂಸ್ಥೆ ಚಾಮರಾಜನಗರ ಮತ್ತು ಕುದೇರು ಗ್ರಾಮಪಂಚಾಯತಿಯ ಸಹಯೋಗದಲ್ಲಿ "ಸ್ವಚ್ಛ ಮೇವ ಜಯತೇ ಆಂದೋಲನ" ಕಾರ್ಯಕ್ರಮದ ಅಡಿಯಲ್ಲಿ ಕುದೇರು ಗ್ರಾಮದಲ್ಲಿ ಶ್ರಮದಾನ ಕಾರ್ಯಕ್ರಮ ಆಯೋಜಿಸಲಾಗಿದ್ದು, ಈ ಕಾರ್ಯಕ್ರಮದಲ್ಲಿ ರೋವರ್ಸ್ ಮತ್ತು ರೇಂಜರ್ಸ್‌ಗಳು ಜಾಥಾ ಕಾರ್ಯಕ್ರಮ, ಮನೆ ಮನೆಗೆ ಅರಿವು ಮೂಡಿಸುವುದು, ಆಸ್ಪತ್ರೆಯ ಆವರಣ ಸ್ವಚ್ಛತೆ, ಆರಕ್ಷಕ ಠಾಣೆಯ ಆವರಣ ಸ್ವಚ್ಛತೆ ಮತ್ತು ಮಾನವ ಸರಪಳಿ ಮಾಡಿ ಸ್ವಚ್ಛ ಮೇವ ಜಯತೇ ಪ್ರತಿಜ್ಞಾ ವಿಧಿಯನ್ನು ಕೈಗೊಂಡರು. ನಂತರ ಪಂಚಾಯತಿ ಅಭಿವೃದ್ಧಿ ಅಧಿಕಾರಿ ಶ್ರೀಮತಿ ಮಮತಾ ರವರು ಸ್ಕೌಟ್ಸ್-ಗೈಡ್ಸ್ ಶಿಸ್ತು ಸಂಸ್ಥೆಯಾಗಿದೆ ಅದೇ ರೀತಿಯಲ್ಲಿ ಸಮಾಜದಲ್ಲಿ ಸೇವೆ ಮಾಡಲು ಯುವಜನತೆ ಪಾತ್ರ ಬಹಳ ಮುಖ್ಯ ಎಂದರು. ಗ್ರಾಮ ಪಂಚಾಯಿತಿಯ ಅಧ್ಯಕ್ಷರಾದ ಶ್ರೀಮತಿ ನಾಗರಾಜಮ್ಮ, ಶ್ರೀ ನಂಜುಂಡಸ್ವಾಮಿ, ಆರಕ್ಷಕ ಠಾಣೆ ಮತ್ತು ಪಂಚಾಯಿತಿ ಕಾರ್ಯಾಲಯ ಸಿಬ್ಬಂದಿ ವರ್ಗದವರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ರೋವರ್ಸ್ ಮತ್ತು ರೇಂಜರ್ಸ್‌ಗಳು, ರೋವರ್ ಸ್ಕೌಟ್ ಲೀಡರ್ ಶ್ರೀ ಶ್ರೀನಾಥ್, ಶ್ರೀ ಪ್ರಸನ್ನಕುಮಾರ್, ರೇಂಜರ್ ಲೀಡರ್ ಮತ್ತು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆಯ ಯುವ ಸಮಿತಿಯ ಅಧ್ಯಕ್ಷರಾದ ಶ್ರೀ ಎಸ್. ಪ್ರದೀಪ್ ರವರು ಕಾರ್ಯಕ್ರಮದಲ್ಲಿ ಹಾಜರಿದ್ದರು.

## ಚಿತ್ರದುರ್ಗ

ಜಿಲ್ಲಾ ಉಪ ಸಮಿತಿಗಳು ಕ್ರಿಯಾತ್ಮಕವಾಗಿ ಚಟುವಟಿಕೆಗಳಿಂದ ಕೂಡಿರಬೇಕು ಎಂದು ರಾಜ್ಯ ಉಪಾಧ್ಯಕ್ಷರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪನವರು ಜಿಲ್ಲೆಯ ಮತ್ತು ಸ್ಥಳೀಯ ಸಂಸ್ಥೆಗಳ ಪದಾಧಿಕಾರಿಗಳನ್ನು ಕೋರಿದರು. ಜಿಲ್ಲಾ ಸಂಸ್ಥೆಯಲ್ಲಿ ನಡೆದ 2019-20ನೇ ಸಾಲಿನ ಪ್ರಗತಿ ಪರಿಶೀಲನಾ ಸಭೆಯ ಅಧ್ಯಕ್ಷತೆವಹಿಸಿ ಅವರು ಮಾತನಾಡಿದರು. ಬೆಂಗಳೂರು ದಕ್ಷಿಣ ಜಿಲ್ಲೆ ಖಜಾಂಚಿಯಾದ ಶ್ರೀ ಎ.ಎಸ್. ಮಧುಸೂದನ್ ಮಾತನಾಡಿ, ಪ್ರತಿ ತಾಲ್ಲೂಕಿನಲ್ಲಿ ಎಕ್ಸಿಕ್ಯೂಟಿವ್ ಹಾಗು ಕೌನ್ಸಿಲ್ ಮೀಟಿಂಗ್‌ಗಳನ್ನು ಮತ್ತು ಬೇಸಿಕ್ ಹಾಗೂ ಬಿಗಿನರ್ಸ್ ಕೋರ್ಸ್‌ಗಳನ್ನು ಜಿಲ್ಲೆಯಲ್ಲಿ ಕಡ್ಡಾಯವಾಗಿ ಮಾಡಬೇಕು ಎಂದು ಸೂಚಿಸಿದರು. ಮೂರು ಕ್ಲಸ್ಟರ್ ಸೇರಿ ಒಂದು ಬಿಗಿನರ್ಸ್ ಕೋರ್ಸ್ ಆರಂಭಿಸಿ ಎಂದು ಸಲಹೆ ನೀಡಿದರು.



ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ. ರೇವಣಸಿದ್ದಪ್ಪನವರು ಪ್ರಾಸ್ತಾವಿಕವಾಗಿ ಜಿಲ್ಲೆಯ ಪ್ರಗತಿ ಹಾಗೂ 2019-20ನೇ ಸಾಲಿನಲ್ಲಿ ಯೋಜಿತ ಚಟುವಟಿಕೆಗಳ ಬಗ್ಗೆ ವಿವರಿಸಿದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಬಿ.ಎ. ಲಿಂಗಾರೆಡ್ಡಿ ಅವರು ಮಾತನಾಡಿ, ಜಿಲ್ಲೆಯಲ್ಲಿನ ಬೆಳವಣಿಗೆ ಹಾಗೂ ರಾಜ್ಯ ಸಂಸ್ಥೆಯ ಸಹಕಾರಗಳನ್ನು ಶ್ಲಾಘಿಸಿದರು. ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ಸುನಿತಾ ಮಲ್ಲಿಕಾರ್ಜುನ್ ಮಾತನಾಡಿ ಜಿಲ್ಲೆಯಲ್ಲಿ ರೇಂಜರ್ಸ್ ಪ್ರಗತಿ ಬಗ್ಗೆ ವಿವರಿಸಿದರು.

ಸಭೆಯಲ್ಲಿ ಜಿಲ್ಲೆ ಮತ್ತು ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು ಉಪಸ್ಥಿತರಿದ್ದರು. ಜಿಲ್ಲಾ ಜಂಟಿಕಾರ್ಯದರ್ಶಿ ಡಾ. ರಹಮತ್



ಉಲ್ಲಾ ಸ್ವಾಗತಿಸಿದರು. ಶ್ರೀ ಮೋಹನ್ ವಂದಿಸಿದರು. ಶ್ರೀ ಸಿ. ರವಿ ಕಾರ್ಯಕ್ರಮ ನಿರೂಪಿಸಿದರು.

* "ಯೋಗದಿಂದ ಮಾತ್ರ ಉತ್ತಮ ಆರೋಗ್ಯ, ಯೋಗ ಇಲ್ಲದಿದ್ದರೆ ಅನಾರೋಗ್ಯ ಖಂಡಿತ. ಪ್ರತಿಯೊಬ್ಬರಿಗೂ ಆರೋಗ್ಯವೇ ಮಹಾಭಾಗ್ಯವಾಗಿರುವುದರಿಂದ ಪ್ರತಿಯೊಬ್ಬರೂ ಯೋಗ ಅಳವಡಿಸಿಕೊಳ್ಳುವುದು ಸೂಕ್ತ" ಎಂದು ಸಾರ್ವಜನಿಕ ಶಿಕ್ಷಣ ಇಲಾಖೆ ಉಪ ನಿರ್ದೇಶಕರಾದ ಶ್ರೀ ಎ.ಜೆ. ಆಂಥೋನಿ ಅವರು ಜಿಲ್ಲಾ ಸಂಸ್ಥೆ ಹಾಗೂ ಸ್ಥಳೀಯ ಸಂಸ್ಥೆ ಸಹಯೋಗದಲ್ಲಿ ಬಾಲಕಿಯರ ಸರ್ಕಾರಿ ಪದವಿ ಪೂರ್ವ ಕಾಲೇಜು ಆವರಣದಲ್ಲಿ ನಡೆದ ಯೋಗ ದಿನಾಚರಣೆ ಹಾಗೂ ವಾರ್ಷಿಕ ಕಾರ್ಯಕ್ರಮಗಳ ಯೋಜನೆ ಪ್ರತಿ ಬಿಡುಗಡೆ ಕಾರ್ಯಕ್ರಮವನ್ನು ಗಿಡಕ್ಕೆ ನೀರು ಎರೆಯುವ ಮೂಲಕ ಉದ್ಘಾಟಿಸಿ ಅವರು ಮಾತನಾಡಿದರು.

ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ. ರೇವಣಸಿದ್ದಪ್ಪ ಮಾತನಾಡಿ, "ಯೋಗ ಮನಸ್ಸನ್ನು ಪ್ರಫುಲ್ಲಗೊಳಿಸುತ್ತದೆ. ಮುಖ್ಯವಾಗಿ ವಿದ್ಯಾರ್ಥಿಗಳಿಗೆ ಯೋಗ ಉಪಯೋಗಕಾರಿ" ಎಂದು ತಿಳಿಸಿದರು.

ಜಿಲ್ಲಾ ಗೈಡ್ಸ್ ಆಯುಕ್ತರಾದ ಶ್ರೀಮತಿ ಸುನಿತಾ ಮಲ್ಲಿಕಾರ್ಜುನ್ ಮಾತನಾಡಿ, "ಅನಾರೋಗ್ಯ ನಿಯಂತ್ರಣಕ್ಕೆ ಯೋಗ ಸಹಕಾರಿ. ದಿನನಿತ್ಯ ಕೆಲಸದ ಒತ್ತಡದಲ್ಲಿ ತೊಡಗುವವರಿಗೆ ಯೋಗ ಮನಸ್ಸಿಗೆ ನೆಮ್ಮದಿ ನೀಡುತ್ತದೆ" ಎಂದು ಹೇಳಿದರು. ಶ್ರೀ ವಿಜಯಕುಮಾರ್ ಸ್ವಾಗತಿಸಿದರು, ಶ್ರೀ ಪಿ.ವೈ. ದೇವರಾಜ್ ಪ್ರಸಾದ್ ವಂದಿಸಿದರು. ಶ್ರೀ ಚಲ್ಮೇಶ್ ಕಾರ್ಯಕ್ರಮ ನಿರೂಪಿಸಿದರು.

## ಚಿಕ್ಕಮಗಳೂರು

ಯುವ ಜನಾಂಗದಲ್ಲಿ ಮೌಲ್ಯಯುತ ವಿಚಾರಗಳ ಬಗ್ಗೆ ಜಾಗೃತಿ ಮೂಡಿಸಿ ಉತ್ತಮ ಸಮಾಜ ನಿರ್ಮಾಣ ಮಾಡಲು ಸ್ಕೌಟ್ಸ್-ಗೈಡ್ಸ್ ಸಹಕಾರಿಯಾಗಿದೆ ಎಂದು ಭಾರತ್ ಸ್ಕೌಟ್ಸ್-ಗೈಡ್ಸ್‌ನ ತಾಲ್ಲೂಕು ಸಮಿತಿಯ ನೂತನ ಅಧ್ಯಕ್ಷ ಡಾ. ಕೆಪಿ. ಅಂಶುಮಂತ್ ತಿಳಿಸಿದರು. ಇಲ್ಲಿನ ಕ್ಷೇತ್ರಶಿಕ್ಷಣಾಧಿಕಾರಿಗಳ ಕಛೇರಿಯಲ್ಲಿ ಶುಕ್ರವಾರ ಭಾರತ್ ಸ್ಕೌಟ್ಸ್-ಗೈಡ್ಸ್‌ನ 2019-20ನೇ ಸಾಲಿನ ವಾರ್ಷಿಕ ಕಾರ್ಯಕ್ರಮಗಳ ಯೋಜನೆ ಪುಸ್ತಕ ಬಿಡುಗಡೆ ಮಾಡಿ ಮಾತನಾಡಿದರು.

ತಾಲ್ಲೂಕು ಸ್ಕೌಟ್ಸ್-ಗೈಡ್ಸ್ ಸಮಿತಿಯ ಕಾರ್ಯಾಧ್ಯಕ್ಷ ಹಾಗು ಕ್ಷೇತ್ರ ಶಿಕ್ಷಣಾಧಿಕಾರಿ, ಶ್ರೀ ಪಿ. ನಾಗರಾಜ್ ಮಾತನಾಡಿ, 'ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟಿನಲ್ಲಿ ಅಳವಡಿಸಲಾದ ಹತ್ತು ಮೌಲ್ಯ ಶಿಕ್ಷಣದ ಮೂಲಾಂಶಗಳಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್‌ನ ಕಾರ್ಯಕ್ರಮಗಳ ಅನುಷ್ಠಾನವು ಒಂದಾಗಿದೆ ಎಂದು ಹೇಳಿ. ಶಿಕ್ಷಣ ಕ್ಷೇತ್ರದಲ್ಲಿರುವವರು ಚಳವಳಿ ಹೆಚ್ಚಿಸುವುದಕ್ಕೆ ಸಹಕರಿಸಬೇಕೆಂದು ಕೋರಿದರು.



ತಾಲ್ಲೂಕು ಸ್ಥಳೀಯ ಕಾರ್ಯದರ್ಶಿ ಶ್ರೀ ಕೆ.ಬಿ. ಮಲ್ಲಪ್ಪ ತಾಲ್ಲೂಕು ಪ್ರೌಢಶಾಲಾ ಸಹ ಶಿಕ್ಷಕರ ಸಂಘದ ಅಧ್ಯಕ್ಷ ಶ್ರೀ ಭದ್ರೇಗೌಡ. ದೈಹಿಕ ಶಿಕ್ಷಣ ಶಿಕ್ಷಕರಾದ ಶ್ರೀ ಪ್ರಭುನಾಯ್ಕ, ಶ್ರೀ ಸತ್ತರ್, ಶ್ರೀ ತಮ್ಮಯ್ಯ, ಶ್ರೀ ಸುಭಾಷ್, ಶ್ರೀ ದಿನೇಶ್, ಶ್ರೀಮತಿ ಟಿ. ಸುಮಲತಾ ಕಾರ್ಯಕ್ರಮ ಪಾಲ್ಗೊಂಡಿದ್ದರು.

* ವಿದ್ಯಾರ್ಥಿಗಳು ಜೀವನದಲ್ಲಿ ಶಿಸ್ತು ಮತ್ತು ಸೇವಾ ಮನೋಭಾವ ರೂಢಿಸಿಕೊಳ್ಳಬೇಕು ಎಂದು ಜಿಲ್ಲಾ ಕಾನೂನು ಸೇವೆಗಳ ಸದಸ್ಯ ಕಾರ್ಯದರ್ಶಿ ಶ್ರೀ ಬಸವರಾಜ ಚೇಂಗಟಿ ಸಲಹೆ ನೀಡಿದರು.

ನಗರದ ಸ್ಕೌಟ್ಸ್-ಗೈಡ್ಸ್ ಭವನದಲ್ಲಿ ಇತ್ತೀಚೆಗೆ ಏರ್ಪಡಿಸಿದ್ದ ಅಂತರಾಷ್ಟ್ರೀಯ ಯೋಗ ದಿನಾಚರಣೆ, ವಿಶ್ವ ಪರಿಸರ

ದಿನಾಚರಣೆ, ಸಂಸ್ಥೆಯ ವಾರ್ಷಿಕ ಕ್ರಿಯಾ ಯೋಜನೆ ಪುಸ್ತಕ ಬಿಡುಗಡೆ ಸಮಾರಂಭದಲ್ಲಿ ಅವರು ಮಾತನಾಡಿದರು.

ಸಾರ್ವಜನಿಕ ಶಿಕ್ಷಣ ಇಲಾಖೆ ಉಪನಿರ್ದೇಶಕ ಶ್ರೀ ನಂಜಯ್ಯ ಅವರು ಮಾತನಾಡಿ, ಪರಿಸರ ಸಂರಕ್ಷಣೆ, ಯೋಗ ಮತ್ತು ಧ್ಯಾನ ಜೀವನದಲ್ಲಿ ಪ್ರಮುಖವಾದವು. ಉತ್ತಮ ಪರಿಸರದಿಂದ ಮನಸ್ಸಿಗೆ ಉಲ್ಲಾಸ ದೊರೆಯುತ್ತದೆ. ಯೋಗ, ಧ್ಯಾನ ಅಭ್ಯಾಸದಿಂದ ನಿರೋಗಿಯಾಗಲು ಸಾಧ್ಯವಾಗುತ್ತದೆ ಎಂದರು. ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಶ್ರೀ ನಂದಕುಮಾರ, ಶ್ರೀ ಕಿರಣ್ ಕುಮಾರ್, ಶ್ರೀಮತಿ ಸಂಧ್ಯಾರಾಣಿ, ಶ್ರೀ ನೀಲಕಂಠಪ್ಪ, ಮತ್ತು ಶ್ರೀ ಪಣಿರಾಜ್ ಉಪಸ್ಥಿತರಿದ್ದರು.

## ದಕ್ಷಿಣ ಕನ್ನಡ

ಜೂನ್ 28 ರಂದು ಸರ್ಕಾರಿ ಪ್ರಥಮದರ್ಜೆ ಕಾಲೇಜು, ಜಿಡಕಲ್ಲು, ಪುತ್ತೂರು ಮತ್ತು ಅರಣ್ಯ ಇಲಾಖೆ ಪುತ್ತೂರು ಸಹಯೋಗದಲ್ಲಿ ವನಮಹೋತ್ಸವ ಆಚರಣೆ ಕಾಲೇಜಿನ ಆವರಣದಲ್ಲಿ ನಡೆಯಿತು. ಮುಖ್ಯ ಅತಿಥಿಯಾಗಿ ಪುತ್ತೂರು ವಲಯ ಅರಣ್ಯಾಧಿಕಾರಿ ಶ್ರೀ ಮೋಹನ್ ಕುಮಾರ್ ಆಗಮಿಸಿ, "ವನಮಹೋತ್ಸವ ಆಚರಣೆಯಾಗಿ ಉಳಿಯಬಾರದು, ಪ್ರತಿಯೊಬ್ಬರೂ ವರ್ಷಕ್ಕೆ ಒಂದು ಗಿಡ ನೆಟ್ಟು ಅದನ್ನು ಬೆಳೆಸುವ ಜವಾಬ್ದಾರಿಯನ್ನು ವಹಿಸಿಕೊಳ್ಳಬೇಕು ಮತ್ತು ಆ ಮೂಲಕ ಪರಿಸರವನ್ನು ಉಳಿಸುವ ಮತ್ತು ಬೆಳೆಸುವಲ್ಲಿ ಕಾರ್ಯಪ್ರವೃತ್ತರಾಗಬೇಕೆಂದು ಕರೆ ನೀಡಿದರು. ಅಧ್ಯಕ್ಷತೆಯನ್ನು ಕಾಲೇಜಿನ ಪ್ರಾಂಶುಪಾಲರಾದ ಶ್ರೀಮತಿ ನಳಿನಾಕ್ಷಿ ವಹಿಸಿ, ಆರ್ಥಿಕ ಸಂಪತ್ತು, ಕೃಷಿ ಸಂಪತ್ತು, ಕೈಗಾರಿಕಾ ಸಂಪತ್ತಿನಂತೆ ಅರಣ್ಯ ಸಂಪತ್ತು ಕೂಡಾ ಅಷ್ಟೇ ಬೆಲೆಬಾಳುವಂತಾದ್ದು, ಆದ್ದರಿಂದ ಅರಣ್ಯ ಸಂಪತ್ತನ್ನು ಉಳಿಸಿ ಬೆಳೆಸುವ ಜವಾಬ್ದಾರಿ ಇಂದಿನ ಯುವ ಪೀಳಿಗೆಯದ್ದು ಎಂದು ತಿಳಿಸಿದರು.

ಕಾಲೇಜಿನ ರೇಂಜರ್ಸ್ ಘಟಕದ ವತಿಯಿಂದ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ರೇಂಜರ್ಸ್ ಘಟಕದ ಸಂಚಾಲಕರಾದ ಡಾ. ಜಿ.ಕೆ. ಸೀಮಾ ಸಹಾಯಕ ಪ್ರಾಧ್ಯಾಪಕರು, ಸಮಾಜಶಾಸ್ತ್ರ ವಿಭಾಗ ಮತ್ತು ರೋವರ್ಸ್ ಘಟಕದ ಸಂಚಾಲಕರಾದ ಶ್ರೀ ಸೇಸಪ್ಪ, ದೈಹಿಕ ನಿರ್ದೇಶಕರು, ಉಪಸ್ಥಿತರಿದ್ದು ಸ್ವಾಗತ ಮತ್ತು ವಂದನಾರ್ಪಣೆಯನ್ನು ನೆರವೇರಿಸಿದರು.

* ಭಾರತ್ ಸ್ಕೌಟ್ಸ್-ಗೈಡ್ಸ್ ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆ ವತಿಯಿಂದ ಲಾಲ್‌ಬಾಗ್‌ನಲ್ಲಿ ವಿಶ್ವ ಯೋಗ ದಿನಾಚರಣೆಯನ್ನು ಆಚರಿಸಲಾಯಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಸಂಸ್ಥೆಯ ಜಿಲ್ಲಾ ಮುಖ್ಯ ಆಯುಕ್ತ ಡಾ. ಎನ್.ಜಿ. ಮೋಹನ್ ವಹಿಸಿದ್ದರು. ರೆಡ್‌ಕ್ರಾಸ್ ಸಂಸ್ಥೆಯ ಆಡಳಿತ ಸಮಿತಿ ಸದಸ್ಯರಾದ ರೋ ಆರ್ಚೀ ಬಾಲ್ಡ್ ಮೆನೇಜಸ್ ರವರು ಗಿಡಕ್ಕೆ ನೀರು ಎರೆಯುವ ಮೂಲಕ ಕಾರ್ಯಕ್ರಮಕ್ಕೆ ಚಾಲನೆ ನೀಡಿ ಯೋಗದಿಂದ ಮಕ್ಕಳಿಗೆ ದೈಹಿಕ ಬೆಳವಣಿಗೆ, ಆರೋಗ್ಯ, ಬುದ್ಧಿಶಕ್ತಿಯನ್ನು ಅಭಿವೃದ್ಧಿಗೊಳಿಸಲು ಸಾಧ್ಯವಾಗುತ್ತ.ದೆ, ಅಲ್ಲದೇ ಸ್ಕೌಟ್ಸ್-ಗೈಡ್ಸ್‌ನ್ನು ಅಳವಡಿಸಿಕೊಂಡರೆ ಅವರ ಮುಂದಿನ ಜೀವನದಲ್ಲಿ ಹೆಚ್ಚಿನ ಪರಿಣಾಮಕಾರಿಯಾಗುತ್ತದೆ ಎಂದು ತಿಳಿಸಿದರು. ಕರ್ನಾಟಕ ರಾಜ್ಯ ಸಂಸ್ಥೆಯಿಂದ 2019-20ನೇ ಸಾಲಿನಲ್ಲಿ ತಯಾರಿಸಿದ ಯೋಜನಾ ಪುಸ್ತಕವನ್ನು ಮುಖ್ಯ ಅತಿಥಿಗಳು ಬಿಡುಗಡೆಗೊಳಿಸಿದರು. ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆಯಿಂದ ಯೋಗದಲ್ಲಿ ರಾಜ್ಯ, ರಾಷ್ಟ್ರ, ಅಂತರಾಷ್ಟ್ರೀಯ ಮಟ್ಟದಲ್ಲಿ ಸಾಧನೆ ಮಾಡಿದ ಹಾಗೂ ಅನೇಕ ಸಂಘ ಸಂಸ್ಥೆಗಳಿಂದ ಯೋಗದಲ್ಲಿ ಸಾಧನೆ ಮಾಡಿದ ಹಾಗೂ ಅನೇಕ ಸಂಘ ಸಂಸ್ಥೆಗಳಿಂದ ಗುರುತಿಸಿದ ಗೈಡರ್ ಶ್ರೀಮತಿ ಅಕ್ಕಮ್ಮ, ಎ.ಎಲ್.ಟಿ. ಹಾಗೂ ವಿವೇಕಾನಂದ ಆಂಗ್ಲ ಮಾಧ್ಯಮ ಶಾಲೆ 9ನೇ ತರಗತಿಯ ಸ್ಕೌಟ್ ವಿದ್ಯಾರ್ಥಿ ಕೆ.ಜೆ. ನಿಶ್ಚಲ್ ಇವರನ್ನು ಸನ್ಮಾನಿಸಲಾಯಿತು.





ಜುಲೈ 22 ರಿಂದ ಆಗಸ್ಟ್ 2 ರ ವರೆಗೆ ಅಮೇರಿಕಾದ ವರ್ಜೀನಿಯಾದಲ್ಲಿ ನಡೆಯಲಿರುವ 24ನೇ ವಿಶ್ವ ಸ್ಕೌಟ್ ಜಾಂಬೂರಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ವಿವಿಧ ವಿದ್ಯಾಸಂಸ್ಥೆಯಿಂದ ಭಾಗವಹಿಸುವ 7 ಸ್ಕೌಟ್ಸ್-ಗೈಡ್ಸ್‌ಗಳು ಹಾಗೂ ಸ್ಕೌಟರ್ ಶ್ರೀ ಬಿ.ಎಮ್. ತುಂಬೆ ಎ.ಎಲ್.ಟಿ.(ಸ್ಕೌ) ಇವರನ್ನು ಅಭಿನಂದಿಸಲಾಯಿತು. ಒಟ್ಟು 200 ಸ್ಕೌಟ್ಸ್-ಗೈಡ್ಸ್ ಹಾಗೂ ಶಿಕ್ಷಕರು ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು.

ಯೋಗ ಶಿಕ್ಷಕಿ ಗೈಡರ್ ಶ್ರೀಮತಿ ಅಕ್ಕಮ್ಮ ಇವರು ಯೋಗದ ಬಗ್ಗೆ ವಿವರಣೆ ನೀಡಿ ಮಕ್ಕಳಿಂದ ಯೋಗಾಭ್ಯಾಸ ನಡೆಸಿಕೊಟ್ಟರು. ಕಾರ್ಯಕ್ರಮದಲ್ಲಿ ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು. ಶ್ರೀಮತಿ ಜಯಶ್ರೀ, ಜಿಲ್ಲಾ ತರಬೇತಿ ಆಯುಕ್ತರು(ಗೈ) ಪ್ರಾಸ್ತಾವಿಕ ಭಾಷಣ ಜೊತೆಯಲ್ಲಿ ಸರ್ವರನ್ನು ಸ್ವಾಗತಿಸಿದರು. ಶ್ರೀಮತಿ ಜಯವಂತಿ ಸೋನ್ಸ್, ಜಿಲ್ಲಾ ಜೊತೆ ಕಾರ್ಯದರ್ಶಿ ಕಾರ್ಯಕ್ರಮ ನಿರೂಪಣೆ ಮಾಡಿದರು. ಹಾಗೂ ಶ್ರೀ ಎಂ.ಜಿ. ಕಜೆ, ಜಿಲ್ಲಾ ಕಾರ್ಯದರ್ಶಿಗಳು ಧನ್ಯವಾದ ತಿಳಿಸಿದರು.

* ಜೂನ್ 27 ರಂದು ರಾಜ್ಯ ಸಂಸ್ಥೆಯಿಂದ ನಿಯೋಜಿತ ಅಧಿಕಾರಿಗಳಾದ ಚಿಕ್ಕಮಗಳೂರು ಜಿಲ್ಲೆಯ ಮುಖ್ಯ ಆಯುಕ್ತರಾದ ಶ್ರೀ ಎಂ.ಎನ್. ಷಡಾಕ್ಷರಿ ಮತ್ತು ಹಾವೇರಿ ಜಿಲ್ಲೆಯ ಮುಖ್ಯ ಆಯುಕ್ತರಾದ ಡಾ. ಮಾಧುರಿ ದೇವದರ್ ರವರು ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆಯ ಪ್ರಗತಿ ಪರಿಶೀಲನೆ ನಡೆಸಿದರು.

ಸಭೆಯಲ್ಲಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು, ತಾಲೂಕು ನೋಡಲ್ ಅಧಿಕಾರಿಗಳು, ಜಿಲ್ಲಾ ಸಹಾಯಕ ಆಯುಕ್ತರು, ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳು ಭಾಗವಹಿಸಿದ್ದರು.

* ಜೂನ್ 21ರಂದು ದ.ಕ. ಜಿಲ್ಲಾ ಪಂಚಾಯತ್ ಹಿ.ಪ್ರಾ.ಶಾಲೆ, ಮಾಲಾರಿನಲ್ಲಿ ಪಾವೂರು ಗ್ರಾಮ ಪಂಚಾಯತ್ ಅಧ್ಯಕ್ಷರು ವಾರ್ಡ್ ಸದಸ್ಯರ ಮತ್ತು ಸಂಸ್ಥೆಯ ಎಸ್.ಡಿ.ಎಂ.ಸಿ. ಅಧ್ಯಕ್ಷರು ಹಾಗೂ ಶಾಲಾ ಸ್ಕೌಟ್ಸ್, ಗೈಡ್ಸ್ ಮಕ್ಕಳ ಸಮ್ಮುಖದಲ್ಲಿ ವಿಶ್ವಯೋಗ ದಿನಾಚರಣೆ, ರಾಜ್ಯ ಸಂಸ್ಥೆಯ ವಾರ್ಷಿಕ ಯೋಜನಾ ಪುಸ್ತಕ ಬಿಡುಗಡೆ ಮತ್ತು ಪರಿಸರ ದಿನಾಚರಣೆಯನ್ನು ಯಶಸ್ವಿಯಾಗಿ ನಡೆಸಲಾಯಿತು. ಸಹಕರಿಸಿದ ಮುಖ್ಯ ಶಿಕ್ಷಕರಿಗೆ ಮತ್ತು ಸಹಶಿಕ್ಷಕರಿಗೆ ಕೃತಜ್ಞತೆ ಸಲ್ಲಿಸಲಾಯಿತು. ಯೋಗ ತರಬೇತಿ ನೀಡಲು ಯೋಗ ಪತಂಜಲಿ ಪ್ರತಿಷ್ಠಾನದ ಸದಸ್ಯರಾದ ಶ್ರೀ ಪಿ.ಮೋಹನ್ ಆಗಮಿಸಿದ್ದರು. ಸದ್ರಿ ಸಂಸ್ಥೆಯ ಗೈಡರ್ ಶ್ರೀಮತಿ ಲೀಡಿಯ ಡಿ' ಸೋಜ ಸ್ವಾಗತಿಸಿದರು. ಕಾರ್ಯದರ್ಶಿ ಶ್ರೀ ಮಜೀದ್ ಮಲಾರ್ ಪ್ರಾಸ್ತಾವಿಕ ನುಡಿಗಳನ್ನಾಡಿದರು. ಮಂಜನಾಡಿ ಶಾಲೆಯ ಸ್ಕೌಟರ್ ಶ್ರೀ ಎ.ಆರ್. ಪ್ರದೀಪ್, ವಂದನಾರ್ಪಣೆ ಮಾಡಿದರು.

* ಸೌಜನ್ಯ ಸ್ಕೌಟ್ ದಳ, ಶ್ರೀ ರಾಮಕೃಷ್ಣ ಪ್ರೌಢಶಾಲೆ ಹರೇಕಳ ಮತ್ತು ಆರ್ಟ್ ಆಫ್ ಲಿವಿಂಗ್ ಸಂಸ್ಥೆ ಮಂಗಳೂರು ಆಶ್ರಯದಲ್ಲಿ ಪ್ರೌಢಶಾಲಾ ಸಭಾಂಗಣದಲ್ಲಿ "ವಿಶ್ವ ಯೋಗ ದಿನಾಚರಣೆ" ಯನ್ನು ಆಚರಿಸಲಾಯಿತು. ಕಾರ್ಯಕ್ರಮವನ್ನು ತ್ರಿಶಕ್ತಿ ವಿದ್ಯಾವರ್ಧಕ ಸಂಘದ ಸದಸ್ಯರಾದ ಶ್ರೀ ಕುಡೆಂಜ ಸೋಮಶೇಖರ್ ಚೌಟ ಅವರು ಉದ್ಘಾಟಿಸಿದರು. ಅಧ್ಯಕ್ಷತೆಯನ್ನು ವಹಿಸಿ ಮಾತನಾಡಿದ ಶಾಲಾ ಮುಖ್ಯೋಪಾಧ್ಯಾಯರಾದ ಶ್ರೀ ಕೆ.ವಿ. ರವೀಂದ್ರ ರೈಯವರು ಯೋಗ ನಮ್ಮ ದೇಶದ ಅತ್ಯಂತ ಪ್ರಾಚೀನ ವಿದ್ಯೆಯಾಗಿದ್ದು. ಅದರ ಔಚಿತ್ಯ ಇಂದಿನ ಕಾಲದಲ್ಲಿ ಅತ್ಯಂತ ಅಗತ್ಯವಾಗಿದೆ ಎಂದರು. ನಂತರ ಆರ್ಟ್ ಆಫ್ ಲಿವಿಂಗ್ ಸಂಸ್ಥೆಯ ಸದಸ್ಯರಾದ ಶ್ರೀ ಸೂರ್ಯ ಪ್ರಕಾಶ್ ಪಕ್ಕಳ,





ಶ್ರೀಮತಿ ಸುನೀತ ಉದಯಕುಮಾರ್, ಶ್ರೀಮತಿ ಸುರೇಖ, ಅಕ್ಷಯ ಕೃಷ್ಣ ಸ್ಕೌಟ್ಸ್-ಗೈಡ್ಸ್‌ಗಳಿಗೆ ಯೋಗ ತರಬೇತಿ ನೀಡಿದರು. ಅತಿಥಿಗಳಾಗಿ ಶ್ರೀ ಕೆ.ಎಸ್. ಹೆಗ್ಡೆ, ವೈದ್ಯಾಧಿಕಾರಿಗಳಾದ ಡಾ. ಗೀತಾಂಜಲಿ ಹಾಗೂ ಡಾ. ಸುಜನ ಶುಭವನ್ನು ಕೋರಿದರು. ಶಿಕ್ಷಕರಾದ ಶ್ರೀ ರವಿಶಂಕರ್ ಸ್ವಾಗತಿಸಿದರು. ದೈಹಿಕ ಶಿಕ್ಷಣ ಶಿಕ್ಷಕರಾದ ಶ್ರೀ ತ್ಯಾಗಂ ಹರೇಕಳ, ಸ್ಕೌಟ್-ಗೈಡ್‌ಗಳಿಗೆ ಯೋಗ ಸಂಕಲ್ಪ ನೆರವೇರಿಸಿ ಕಾರ್ಯಕ್ರಮ ನಿರೂಪಿಸಿದರು.

* ಭಾರತ್ ಸ್ಕೌಟ್ಸ್-ಗೈಡ್ಸ್ ಉಳ್ಳಾಲ ಸ್ಥಳೀಯ ಸಂಸ್ಥೆ ಹಾಗೂ ಹರೇಕಳ ರಾಮಕೃಷ್ಣ ಪ್ರೌಢಶಾಲೆಯ ಸೌಜನ್ಯ ಸ್ಕೌಟ್ ದಳದ ವತಿಯಿಂದ ಕೊಣಾಜೆಯ ಪರಂಡೆ ಗದ್ದೆಯಲ್ಲಿ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್‌ಗಳಿಗೆ ನಡೆದ ಕೆಸರುಗದ್ದೆ ಕ್ರೀಡೋತ್ಸವ, ಭತ್ತ ನಾಟಿ ಕಾರ್ಯಕ್ರಮದ ಸಮಾರೋಪ ಸಮಾರಂಭದ ಮುಖ್ಯ ಅತಿಥಿಯಾಗಿ ಭಾಗವಹಿಸಿ ಮಾತನಾಡಿದ ಮೂಡದ ಮಾಜಿ ಅಧ್ಯಕ್ಷರಾದ ಶ್ರೀ ಇಬ್ರಾಹಿಂ ಕೋಡಿಜಾಲ್ ಇವರು ಕ್ರೀಡೆ ಎಂಬುದು ಸೌಹಾರ್ದತೆಯ ಸಂಕೇತ, ಕ್ರೀಡೆಯಲ್ಲಿ ಪಾಲ್ಗೊಳ್ಳುವ ಮಕ್ಕಳಲ್ಲಿ ಸೌಹಾರ್ದತೆ ಬೆಳೆಯುತ್ತದೆ ಎಂದರು. ಅಧ್ಯಕ್ಷತೆಯನ್ನು ಶ್ರೀ ರಾಮಕೃಷ್ಣ ಪ್ರೌಢಶಾಲಾ ಮುಖ್ಯೋಪಾಧ್ಯಾಯರಾದ ಶ್ರೀ ರವೀಂದ್ರ ರೈ ಯವರು ವಹಿಸಿ ಶುಭವನ್ನು ಕೋರಿದರು. ಮುಖ್ಯ ಅತಿಥಿಗಳಾಗಿ ಸಮಾಜ ಸೇವಕರಾದ ಶ್ರೀ ಯಾಧವ ಶೆಟ್ಟಿ ಪರಂಡೆ, ಶ್ರೀಮತಿ ಸುರೇಖ ಪೂಜಾರಿ, ಶ್ರೀ ಹರೀಶ್ ಪೂಜಾರಿ ಉಪಸ್ಥಿತರಿದ್ದರು. ಇದೇ ಸಂದರ್ಭದಲ್ಲಿ ವಿಶಾಲವಾದ ಗದ್ದೆಯನ್ನು ಕಾರ್ಯಕ್ರಮಕ್ಕೆ ಒದಗಿಸಿ ಕೊಟ್ಟ ಶ್ರೀ ರಮೇಶ್ ಪೂಜಾರಿ ಅವರನ್ನು ಸನ್ಮಾನಿಸಲಾಯಿತು.

ಸಂಯೋಜಕರಾದ ಶ್ರೀ ತ್ಯಾಗಂ ಹರೇಕಳ ನಿರೂಪಿಸಿದರು. ಗೈಡ್ ಶಿಕ್ಷಕಿ ಶ್ರೀಮತಿ ಸುಶೀಲಬಾಯ್, ಶ್ರೀ ರವಿಶಂಕರ್, ಶ್ರೀ ಶಿವಕುಮಾರ್ ವಿಜೇತರ ಪಟ್ಟಿ ವಾಚಿಸಿದರು. ಶ್ರೀ ಅಬ್ದುಲ್ ಮಜೀದ್ ಸ್ವಾಗತಿಸಿದರು.

* ಜೂನ್ 21 ರಂದು ಕರ್ನಾಟಕ ರಾಜ್ಯ ಸಂಸ್ಥೆಯಿಂದ 2019-20ರಲ್ಲಿ ಹಮ್ಮಿಕೊಳ್ಳಲಿರುವ ಕಾರ್ಯಕ್ರಮಗಳ ಯೋಜನಾ ಪುಸ್ತಕವನ್ನು ಬಿಡುಗಡೆ ಗೊಳಿಸುವ ಕಾರ್ಯಕ್ರಮವನ್ನು ಭಾರತ್ ಸ್ಕೌಟ್ಸ್-ಗೈಡ್ಸ್, ಪಂಜ ಸ್ಥಳೀಯ ಸಂಸ್ಥೆಯು ಬಾಳಿಲ ವಿದ್ಯಾಬೋಧಿನೀ ಪ್ರೌಢಶಾಲೆಯ ಸಭಾಂಗಣದಲ್ಲಿ ಏರ್ಪಡಿಲಾಗಿತ್ತು.

ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಬಿ.ಕೆ. ಮಾಧವ, ಸಮಾರಂಭದ ಅಧ್ಯಕ್ಷತೆ ವಹಿಸಿ, ಯೋಜನಾ ಪುಸ್ತಕ ಬಿಡುಗಡೆ ಮಾಡಿದರು. ಬಾಳಿಲ ಪ್ರೌಢಶಾಲೆಯ ಸಂಚಾಲಕರಾದ ಶ್ರೀ ವೆಂಕಟ್ರಮಣ ಭಟ್, ಮುಖ್ಯಗುರು ಶ್ರೀ ಎಂ.ಎಸ್. ಶಿವರಾಮಶಾಸ್ತ್ರಿ, ವಿಶೇಷ ಆಹ್ವಾನಿತರಾಗಿ ಭಾಗವಹಿಸಿದ್ದರು. ಸ್ಥಳೀಯ ಸಂಸ್ಥೆಯ ಸಂಘಟಕ-ಕ್ಷೇತ್ರ ಸಂಪನ್ಮೂಲ ವ್ಯಕ್ತಿ ಶ್ರೀ ಲಿಂಗಪ್ಪ ಬೆಳ್ಳಾರೆ. ಉಪಾಧ್ಯಕ್ಷ ಶ್ರೀ ದಾಮೋಧರ ನೇರಳ, ಸ್ಕೌಟರ್ ಪ್ರತಿನಿಧಿ ಶ್ರೀ ಸುಬ್ರಹ್ಮಣ್ಯ ಬೆಳ್ಳಾರೆ ಮತ್ತು ಶ್ರೀಮತಿ ವೇದಾವತಿ ನಾಗತೀರ್ಥ, ಸಹಾಯಕ ಕಾರ್ಯದರ್ಶಿ ಶ್ರೀ ಶಿವಪ್ರಸಾದ್ ಜಿ. ಹಾಗೂ ಸ್ಕೌಟ್-ಗೈಡ್ ಶಿಕ್ಷಕರು ಉಪಸ್ಥಿತರಿದ್ದರು.

ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಉದಯಕುಮಾರ್ ರೈ ಸ್ವಾಗತಿಸಿದರು. ಕೋಶಾಧಿಕಾರಿ ಶ್ರೀ ವಾಸುದೇವ ನಡ್ಕ ವಂದಿಸಿದರು. ಈ ಕಾರ್ಯಕ್ರಮವನ್ನು ಗೈಡರ್ ಬಿ.ಬಿ. ಸಹನಾ ನಿರೂಪಿಸಿದರು.

* ಜೂನ್ 21 ರಂದು ಸಂತ ಜೋಸೆಫ್ ಅನುದಾನಿತ ಹಿರಿಯ ಪ್ರಾಥಮಿಕ ಶಾಲೆ, ಪಜೀರು ಇಲ್ಲಿ ಸ್ಥಳೀಯ ಸಂಸ್ಥೆಯ ವತಿಯಿಂದ ಸ್ಕೌಟ್ಸ್-ಗೈಡ್ಸ್ ವಾರ್ಷಿಕ ಯೋಜನಾ ಪುಸ್ತಕ ಬಿಡುಗಡೆ, ಪರಿಸರ ದಿನಾಚರಣೆ ಮತ್ತು ವಿಶ್ವ ಯೋಗ ದಿನಾಚರಣೆ ನಡೆಯಿತು. ಶಾಲೆಯ ಸಂಚಾಲಕರು ಹಾಗೂ ಸ್ಥಳೀಯ ಚರ್ಚ್‌ನ ಧರ್ಮಗುರುಗಳಾದ ವಂದನೀಯ ಫಾ॥ ಸುನಿಲ್ ಜೋಸೆಫ್ ವೇಗಸ್‌ರವರು ಅಧ್ಯಕ್ಷತೆ ವಹಿಸಿದ್ದರು. ವೇದಿಕೆಯಲ್ಲಿ ಪಜೀರು ಗ್ರಾಮ ಪಂಚಾಯತ್ ಅಧ್ಯಕ್ಷರಾದ ಶ್ರೀ ಸೀತಾರಾಮ ಶೆಟ್ಟಿ, ಹೂ ಹಾಕುವ ಕಲ್ಲು ಕ್ಲಸ್ಟರ್‌ನ ಸಿ.ಆರ್.ಪಿ. ಶ್ರೀಮತಿ ಆಶಾ, ಸಂಸ್ಥೆಯ ಉಪಾಧ್ಯಕ್ಷರಾದ ಸಿಸ್ಟರ್ ಲೌರಿನ್ ಕುಟೀನ್ಹಾ, ಶಾಲಾ ಮುಖ್ಯ ಶಿಕ್ಷಕಿ ಸಿಸ್ಟರ್ ಇನೆಟ್ ಡಿ. ಸೋಜಾ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಜೋನ್ ಫೆರ್ನಾಂಡೀಸ್ ಹಾಜರಿದ್ದರು. ಕಾರ್ಯದರ್ಶಿ ಶ್ರೀ ಜೋನ್ ಫೆರ್ನಾಂಡೀಸ್ ಸ್ವಾಗತಿಸಿದರು. ಶ್ರೀ ಸೀತಾರಾಮ ಶೆಟ್ಟಿಯವರು ಗಿಡಕ್ಕೆ ನೀರು ಎರೆದು ಕಾರ್ಯಕ್ರಮ ಉದ್ಘಾಟಿಸಿದರು. ನಂತರ ಸಿ.ಆರ್.ಪಿ. ಶ್ರೀಮತಿ ಆಶಾರವರು ರಾಜ್ಯ ಸಂಸ್ಥೆಯಿಂದ ಬಂದಂತಹ ಸ್ಕೌಟ್ಸ್-ಗೈಡ್ಸ್ ವಾರ್ಷಿಕ ಯೋಜನಾ ಪುಸ್ತಕ ಬಿಡುಗಡೆ ಮಾಡಿದರು. ಶಾಲಾ ಆವರಣದಲ್ಲಿ ಒಂದು ಮಹಾಗನಿ ಗಿಡವನ್ನು ನೆಡಲಾಯಿತು. ನಂತರ ಸಂಸ್ಥೆಯ ಖಜಾಂಚಿ ಶ್ರೀ ಫೆಲಿಕ್ಸ್ ಡಿ. ಸೋಜಾರವರು ಸ್ಕೌಟ್-ಗೈಡ್‌ಗಳಿಗೆ ಯೋಗದ ಬಗ್ಗೆ ಮಾಹಿತಿ ನೀಡಿ ಯೋಗಾಸನಗಳನ್ನು ಕಲಿಸಿ ಯೋಗಾಸನಗಳನ್ನು ಮಾಡಿಸಿದರು. ಕೊನೆಯಲ್ಲಿ ಸಹ ಕಾರ್ಯದರ್ಶಿ ಶ್ರೀಮತಿ ರಂಜಿನಿಯವರು ವಂದಿಸಿದರು. ಖಜಾಂಚಿ ಶ್ರೀ ಫೆಲಿಕ್ಸ್ ಡಿ. ಸೋಜಾರವರು ಕಾರ್ಯಕ್ರಮ

ನಿರೂಪಿಸಿದರು. ಶ್ರೀ ಕಾರ್ಯಕ್ರಮದಲ್ಲಿ ಇದೇ ಶಾಲೆಯ ಹಾಗೂ ಇತರ ಶಾಲೆಗಳಿಂದ ಬಂದ ಒಟ್ಟು 210 ಮಕ್ಕಳು ಭಾಗವಹಿಸಿದ್ದರು.

* ಜೂನ್ 21 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ ಮಡಂತ್ಯಾರು. ಸೇಕ್ರೆಡ್ ಹಾರ್ಟ್ ಪ್ರಥಮ ದರ್ಜೆ ಕಾಲೇಜು ಮಡಂತ್ಯಾರು ಮತ್ತು ಗಾರ್ಡಿಯನ್ ಏಂಜಲ್ ಹಿರಿಯ ಪ್ರಾಥಮಿಕ ಶಾಲೆ ಮಡಂತ್ಯಾರು ಇವುಗಳ ಸಂಯುಕ್ತ ಆಶ್ರಯದಲ್ಲಿ ಸೇಕ್ರೆಡ್ ಹಾರ್ಟ್ ಕಾಲೇಜಿನ ಒಳಾಂಗಣ ಕ್ರೀಡಾಂಗಣದಲ್ಲಿ ಅಂತರಾಷ್ಟ್ರೀಯ ಯೋಗ ದಿನಾಚರಣೆ, ಪರಿಸರ ದಿನಾಚರಣೆ, ಚಿಣ್ಣರ ವನದರ್ಶನ ಮತ್ತು ಯೋಜನಾ ಪುಸ್ತಕ ಬಿಡುಗಡೆ ಕಾರ್ಯಕ್ರಮಗಳನ್ನು ಜರುಗಿಸಲಾಯಿತು. ಸೇಕ್ರೆಡ್ ಹಾರ್ಟ್ ವಿದ್ಯಾಸಂಸ್ಥೆಗಳ ಸಂಚಾಲಕರಾದ ವಂ॥ ಸ್ವಾಮಿ॥ ಬೇಸಿಲ್ ವಾಸ್ ರವರು ಕಾರ್ಯಕ್ರವನ್ನು ಉದ್ಘಾಟಿಸಿ ಪ್ರತಿನಿತ್ಯ ಯೋಗ ಮಾಡುವುದರಿಂದ ನಾವು ರೋಗ ಮುಕ್ತರಾಗಬಹುದು ಎಂದು ಹೇಳಿದರು. ಸಂಸ್ಥೆಯ ಅಧ್ಯಕ್ಷರಾದ ಹಾಜಿ॥ ಅಬ್ದುಲ್ ಲತೀಫ್ ಸಾಹೇಬರು ಸಂಸ್ಥೆಯ ಚಟುವಟಿಕೆಗಳಿಗೆ ಸಹಕರಿಸುತ್ತಿದರುವ ಸೇಕ್ರೆಡ್ ಹಾರ್ಟ್ ವಿದ್ಯಾಸಂಸ್ಥೆಗಳ ಸಂಚಾಲಕರು ಮತ್ತು ಸಂಸ್ಥೆಗಳ ಮುಖ್ಯಸ್ಥರ ಸೇವೆಯನ್ನು ಶ್ಲಾಘಿಸಿದರು. ಸೇಕ್ರೆಡ್ ಹಾರ್ಟ್ ಪ್ರಥಮ ದರ್ಜೆ ಕಾಲೇಜು ಮಡಂತ್ಯಾರಿನ ಪ್ರಾಂಶುಪಾಲರಾದ ಪ್ರೊ॥ ಅಲೆಕ್ಸ್‌ಐವನ್ ಸಿಕ್ವೇರಾರವರು ಎಲ್ಲರನ್ನು ಸ್ವಾಗತಿಸಿ ಯೋಜನಾ ಪುಸ್ತಕ ಬಿಡುಗಡೆ ಗೊಳಿಸಿದರು. ಮಡಂತ್ಯಾರು ಶಾಖೆಯ ವಲಯ ಅರಣ್ಯಾಧಿಕಾರಿಗಳಾದ ಶ್ರೀ ಉಲ್ಲಾಸ್‌ರವರು ಎಲ್ಲಾ ಮಕ್ಕಳಿಗೆ ಸಾಕಷ್ಟು ಗಿಡಗಳನ್ನು ಒದಗಿಸಿ ಅರಣ್ಯ ರಕ್ಷಣೆಯ ಅಗತ್ಯತೆಯ ಬಗ್ಗೆ ಮಾಹಿತಿ ನೀಡಿದರು. ಸರಕಾರಿ ಪ್ರಥಮ ದರ್ಜೆ ಕಾಲೇಜ್‌ನ ದೈಹಿಕ ಶಿಕ್ಷಣ ನಿರ್ದೇಶಕರಾದ ಶ್ರೀ ಬಿ. ರವಿಶಂಕರ್ ರವರು ಯೋಗ ಶಿಕ್ಷಣದ ಅವಶ್ಯಕತೆ ಮತ್ತು ಮಹತ್ವದ ಬಗ್ಗೆ ತಿಳಿಸಿದರು. ಸೇಕ್ರೆಡ್ ಹಾರ್ಟ್ ಕಾಲೇಜು ಮಡಂತ್ಯಾರಿನ ಎನ್.ಸಿ.ಸಿ. ಆಫೀಸರ್ ಶ್ರೀ ಇಲ್ಯಾಸ್, ಎನ್.ಎಸ್.ಎಸ್. ಅಧಿಕಾರಿ ಶ್ರೀ ಜಗನ್ನಾಥ್, ಗಾರ್ಡಿಯನ್ ಏಂಜಲ್ಸ್ ಹಿ.ಪ್ರಾ. ಶಾಲೆಯ ಮುಖ್ಯೋಪಾಧ್ಯಾಯಿನಿ ಶ್ರೀಮತಿ ಜೆಸಿಂತಾ ಮೆಟಿಲ್ಡಾ ಲೋಬೋ ಮತ್ತು ಯೋಗ ಶಿಕ್ಷರಾದ ಶ್ರೀ ರಮೇಶ್ ಮೂಲ್ಯರವರು ವೇದಿಕೆಯಲ್ಲಿ ಉಪಸ್ಥಿತರಿದ್ದರು. ಸಂಸ್ಥೆಯ ಕೋಶಾಧಿಕಾರಿ ಶ್ರೀಮತಿ ಸುಜಾತಾರವರು ಧನ್ಯವಾದ ಸಮರ್ಪಣೆ ಮಾಡಿದರು. ಕಾರ್ಯದರ್ಶಿ ಶ್ರೀ ಶಾಂತಾರಾಮ ಪ್ರಭು ರವರು ಕಾರ್ಯಕ್ರಮ ನಿರೂಪಿಸಿದರು.

* ಜೂನ್ 21 ರಂದು ಸರಕಾರಿ ಮಾದರಿ ಉನ್ನತ ಹಿರಿಯ ಪ್ರಾಥಮಿಕ ಶಾಲೆ ಉಪ್ಪಿನಂಗಡಿಯಲ್ಲಿ ವಿಶ್ವಯೋಗ ದಿನವನ್ನು ಆಚರಿಸಲಾಯಿತು.

ಕಾರ್ಯಕ್ರಮವನ್ನು ಪುತ್ತೂರು ತಾಲೂಕು ಪಂಚಾಯತ್ ಸದಸ್ಯರಾದ ಶ್ರೀಮತಿ ಸುಜಾತ ಕೃಷ್ಣ ಆಚಾರ್ಯರವರು ಉದ್ಘಾಟಿಸಿದರು. ವೇದಿಕೆಯಲ್ಲಿ ಶಾಲಾಭಿವೃದ್ಧಿ ಸಮಿತಿ ಅಧ್ಯಕ್ಷರಾದ ಶ್ರೀಮೊಯ್ದಿನ್ ಕುಟ್ಟಿ, ಹಿರಿಯ ವಿದ್ಯಾರ್ಥಿ ಸಂಘದ ಮಾಜಿ ಅಧ್ಯಕ್ಷರಾದ ಶ್ರೀ ಚಂದ್ರಶೇಖರ್, ಶಾಲಾ ಮುಖ್ಯ ಗುರು ಶ್ರೀಮತಿ ಎಂ. ದೇವಕಿ ಹಾಗೂ ಶಾಲಾ ದೈಹಿಕ ಶಿಕ್ಷಣ ಶಿಕ್ಷಕಿ ಶ್ರೀಮತಿ ವಂದನಾರವರು ವೇದಿಕೆಯಲ್ಲಿ ಉಪಸ್ಥಿತರಿದ್ದರು.

ನೆಲಜಲ ಸಂರಕ್ಷಣಾ ವೇದಿಕೆಯ ಅಧ್ಯಕ್ಷರಾದ ಶ್ರೀ ಗೊ. ರಾಜಗೋಪಾಲ್ ಭಟ್ ಅವರು ಔಷಧೀಯ ಸಸ್ಯಗಳ ಬಗ್ಗೆ ಮಾಹಿತಿ ಕಾರ್ಯಗಾರವನ್ನು ನಡೆಸಿದರು. ವಿವಿಧ ಬಗೆಗಳ ಔಷಧಿ ಸಸ್ಯಗಳಿಂದ ಆಗುವ ಉಪಯೋಗಗಳನ್ನು ತಿಳಿಸಿದರು. ಬಳಿಕ ಪರಿಸರ ಸ್ವಚ್ಛತಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಯಿತು. ಕಾರ್ಪೋರೇಷನ್ ಬ್ಯಾಂಕಿನಿಂದ ಶಾಲಾ ಮುಂಭಾಗದವರೆಗೆ ಸ್ಕೌಟ್-ಗೈಡ್‌ಗಳು ಸ್ವಚ್ಛಗೊಳಿಸಿದರು. ವನ ಮಹೋತ್ಸವ ಕಾರ್ಯಕ್ರಮದಲ್ಲಿ ಶಾಲಾ ಮುಂಭಾಗದಲ್ಲಿ ವಿವಿಧ ರೀತಿಯಾಗಿ ಹೂವಿನ, ಹಣ್ಣಿನ ಮತ್ತು ಔಷಧೀಯ ಗಿಡಗಳನ್ನು ನೆಡೆಸಲಾಯಿತು.

ಶ್ರೀಮತಿ ಹರೀಶ್ ನಾಯಕ್ ನಟ್ಟಿಬೈಲುರವರು ವಿವಿಧ ಬಗೆಗಳ ಸಸ್ಯಗಳ, ಹಣ್ಣುಗಳ, ಹೂವುಗಳ ಸಸಿಗಳನ್ನು ಕಸಿಕಟ್ಟುವ ರೀತಿಯನ್ನು ಹಾಗೂ ಉಪಯೋಗಗಳ ಮಾಹಿತಿಗಳನ್ನು ವಿವರಿಸಿದರು.

* ಜೂನ್ 21 ರಂದು ಸೈಂಟ್ ಆನ್ಸ್ ಆಂಗ್ಲ ಮಾಧ್ಯ ಶಾಲೆ ಕಡಬ, ಇಲ್ಲಿ ವಿಶ್ವಯೋಗ ದಿನಾಚರಣೆಯನ್ನು ಆಚರಿಸಲಾಯಿತು. ಕಾರ್ಯಕ್ರಮವು ಪ್ರೌಢಶಾಲೆಯ ಮುಖ್ಯ ಶಿಕ್ಷಕರಾದ ರೆ.ಫಾ. ಅಮಿತ್ ಪ್ರಕಾಶ್ ರೋಡ್ರಿಗಸ್‌ರವರ ಅಧ್ಯಕ್ಷತೆಯಲ್ಲಿ ನೆರವೇರಿತು. ಈ ಕಾರ್ಯಕ್ರಮದಲ್ಲಿ ಪ್ರಾಥಮಿಕ ಶಾಲೆಯ ಮುಖ್ಯ ಶಿಕ್ಷಕಿ ಶ್ರೀಮತಿ ದಕ್ಷ ಕುಮಾರಿ ಹಾಗೂ ಕಬ್-ಬುಲ್‌ಬುಲ್‌ನ ನಾಯಕಿಯರಾದ ಶ್ರೀಮತಿ ಜಯಶ್ರೀ, ಶ್ರೀಮತಿ ಕುಮುದ, ಶ್ರೀಮತಿ ಸ್ವಾತಿ ಬಿ ಹಾಗೂ ಗೈಡ್ ನಾಯಕಿಯರಾದ ಶ್ರೀಮತಿ ಯು. ಕುಸುಮಾವತಿ, ಶ್ರೀಮತಿ ಪಿ.ಆರ್. ಲತಾ ಮತ್ತು ಸ್ಕೌಟ್ ಶಿಕ್ಷಕ ಶ್ರೀ ಅರುಣ್ ಕುಮಾರ್ ಉಪಸ್ಥಿತರಿದ್ದರು. ಕಾರ್ಯಕ್ರಮದಲ್ಲಿ ಶಾಲೆಯ

ಕಬ್-ಬುಲ್‌ಬುಲ್ ಹಾಗೂ ಸ್ಕೌಟ್-ಗೈಡ್‌ನ ಎಲ್ಲಾ ವಿದ್ಯಾರ್ಥಿಗಳು ಭಾಗವಹಿಸಿದ್ದರು.

* ಜೂನ್ 28ರಂದು ಸ್ಥಳೀಯ ಸಂಸ್ಥೆ ಉಪ್ಪಿನಂಗಡಿಯ 2019-20ನೇ ಸಾಲಿನ ವಾರ್ಷಿಕ ಮಹಾ ಸಭೆ ಹಾಗೂ ಪುನಶ್ಚೇತನ ಸಭೆಯನ್ನು ಉಪ್ಪಿನಂಗಡಿ ಸರಕಾರಿ ಮಾದರಿ ಉನ್ನತ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ನಡೆಸಲಾಯಿತು. ಅಧ್ಯಕ್ಷತೆಯನ್ನು ಉಪ್ಪಿನಂಗಡಿ ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ ಅಧ್ಯಕ್ಷರಾದ ಶ್ರೀ ಅಬ್ರಾಹಂ ವರ್ಗೀಸ್‌ರವರು ವಹಿಸಿ, ಶ್ರೀ ಎನ್.ಜಿ. ಮೋಹನ್ ಜಿಲ್ಲಾ ಮುಖ್ಯ ಆಯುಕ್ತರು ದೀಪ ಬೆಳಗಿಸುವ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿದರು. ವಾರ್ಷಿಕ ಕಾರ್ಯಕ್ರಮಗಳ ಯೋಜನಾ ವಿವರವನ್ನು ಹೊಂದಿರುವ ಪುಸ್ತಕಗಳನ್ನು ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಅಬ್ರಹಾಂ ವರ್ಗೀಸ್ ರವರು ಬಿಡುಗಡೆ ಮಾಡಿದರು.

ಪುನಶ್ಚೇತನ ಶಿಬಿರವನ್ನು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಘಟಕ ಸ್ಕೌಟ್ ಶ್ರೀ ಭರತ್‌ರಾಜ್ ರವರ ನೇತೃತ್ವದಲ್ಲಿ ನಡೆಸಲಾಯಿತು. ಗೈಡ್ ಶಿಕ್ಷಕಿ ಶ್ರೀಮತಿ ಸುನೀತಾ ಎಲ್.ಟಿ. ರವರು ಶಿಕ್ಷಕರ ಪರಿಚಯದೊಂದಿಗೆ ಚಾಲನೆ ನೀಡಿದರು. ಉಪ್ಪಿನಂಗಡಿ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀಮತಿ ವಂದನಾರವರು ವಂದಿಸಿದರು.

* ಸ್ಥಳೀಯ ಸಂಸ್ಥೆ ಪುತ್ತೂರು ಇದರ ವತಿಯಿಂದ ಶ್ರೀ ರಾಮಕೃಷ್ಣ ಪ್ರೌಢಶಾಲೆ ಕೊಂಬೆಟ್ಟು ಇಲ್ಲಿ ಸ್ಕೌಟ್-ಗೈಡ್ ಗಳಿಂದ ವಿಶ್ವ ಯೋಗ ದಿನಾಚರಣೆಯನ್ನು ಆಚರಿಸಲಾಯಿತು.

ಸ್ಥಳೀಯ ಸಂಸ್ಥೆ ಪುತ್ತೂರು ಇದರ ಅಧ್ಯಕ್ಷರು ರೆವರೆಂಡ್ ಶ್ರೀ ವಿಜಯ ಹಾರ್ವಿನ್ ಇವರ ಅಧ್ಯಕ್ಷತೆಯಲ್ಲಿ ನಡೆದ ಕಾರ್ಯಕ್ರಮದಲ್ಲಿ ಅಧ್ಯಕ್ಷರು ಮಾತನಾಡಿ ಯೋಗ ಎಂಬುದು ಒಂದು ಸುಯೋಗ. ಮನುಷ್ಯನ ದೈಹಿಕ ಆರೋಗ್ಯದ ಜೊತೆಯಲ್ಲಿ ಮಾನಿಸಕ ನೆಮ್ಮದಿಯನ್ನು ಪಡೆಯಲು ಯೋಗವು ಒಂದು ಉತ್ತಮ ಸಾಧನ. ಮುಂದಿನ ಪ್ರಜೆಗಳಾದ ನೀವು ನಿಮ್ಮ ಜೀವನದಲ್ಲಿ ಯೋಗವನ್ನು ಅಳವಡಿಸಿಕೊಳ್ಳಿ ಎಂಬುದಾಗಿ ಹೇಳಿ ಮಕ್ಕಳಿಗೆ ಯೋಗ ದಿನದ ಶುಭವನ್ನು ಹಾರೈಸಿದರು.

ಮುಖ್ಯ ಅತಿಥಿ ಶ್ರೀ ರಾಮಕೃಷ್ಣ ಪ್ರೌಢಶಾಲೆಯ ಮುಖ್ಯ ಗುರು ಶ್ರೀಮತಿ ರೂಪಕಲಾ ಸ್ಕೌಟ್ಸ್-ಗೈಡ್ಸ್ ವಾರ್ಷಿಕ ಕ್ರಿಯಾ ಯೋಜನೆಯ ಪುಸ್ತಕವನ್ನು ಅನಾವರಣಗೊಳಿಸಿ ಯೋಗದ ಮಹತ್ವವನ್ನು ಸ್ಕೌಟ್-ಗೈಡ್‌ಗಳಿಗೆ ತಿಳಿಸಿದರು.

ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀಮತಿ ವಿದ್ಯಾ ಆರ್. ಗೌರಿಯವರು ಈ ಕಾರ್ಯಕ್ರಮದ ಪ್ರಾಸ್ತಾವಿಕತೆಯನ್ನು ಹೇಳಿ ಕಾರ್ಯಕ್ರಮಕ್ಕೆ ಆಗಮಿಸಿದ ಸರ್ವರನ್ನು ಸ್ವಾಗತಿಸಿದರು. ಜಿಲ್ಲಾ ಸಂಸ್ಥೆಯ ರೋವರ್ ಲೀಡರ್ ಶ್ರೀ ಪ್ರೀತೇಶ್ ಮತ್ತು ಗೈಡ್ ಕ್ಯಾಪ್ಟನ್ ಶ್ರೀಮತಿ ಮೇಬಲ್ ಡಿಸೋಜ ಇವರು ಸ್ಕೌಟ್-ಗೈಡ್‌ಗಳಿಗೆ ಯೋಗ ದಿನಾಚರಣೆಯ ಶುಭವನ್ನು ಕೋರಿದರು. ಶ್ರೀಮತಿ ಸುನೀತಾ ಅವರು ಧನ್ಯವಾದ ಸಮರ್ಪಣೆ ಮಾಡಿದರು. ಯೋಗ ತರಬೇತುದಾರರು ಸ್ಕೌಟ್-ಗೈಡ್‌ಗಳಿಂದ ಯೋಗವನ್ನು ಮಾಡಿಸಿದರು.

* ಜೂನ್ 21 ರಂದು ವಿವೇಕಾನಂದ ಆಂಗ್ಲ ಮಾಧ್ಯಮ ತೆಂಕಿಲ ಶಾಲೆಯ ಪುತ್ತೂರು "ವಿವೇಕಾನಂದ ಸ್ಕೌಟ್ಸ್, ಕಬ್ ದಳ ಮತ್ತು ನಿವೇದಿತಾ ಗೈಡ್ಸ್ ಕಂಪೆನಿ"ಗಳು ವಿಶ್ವ ಪರಿಸರ ದಿನಾಚರಣೆಯನ್ನು ಹಾಗೂ ಅಂತಾರಾಷ್ಟ್ರೀಯ ಯೋಗ ದಿನಾಚರಣೆಯನ್ನು ಆಚರಿಸಿದರು.

ಕಾರ್ಯಕ್ರಮದಲ್ಲಿ ಶ್ರೀಮತಿ ಸಂಧ್ಯಾ, ಪ್ರಾಥಮಿಕ ವಿಭಾಗದ ಮುಖ್ಯೋಪಾಧ್ಯಾಯಿನಿ ಗಿಡನೆಟ್ಟು "ಪರಿಸರ ಸಂರಕ್ಷಣೆಯ ಹೊಣೆಯನ್ನು ತಾವೆಲ್ಲರೂ ಹೊತ್ತು ಶಾಲೆಯ ಸುತ್ತಮುತ್ತಲಿನ ಪರಿಸರವನ್ನು ಹಸಿರುಮಯವಾಗಿಡಬೇಕೆಂದು" ಹೇಳುವುದರ ಮೂಲಕ ಅವರ ಕರ್ತವ್ಯಗಳನ್ನು ಅವರಿಗೆ ನೆನಪಿಸಿ ಹುರಿದುಂಬಿಸಿದರು. ಸಂಪನ್ಮೂಲ ವ್ಯಕ್ತಿಯಾಗಿ ಯೋಗದಲ್ಲಿ ಸ್ವರ್ಣಪದಕ ವಿಜೇತೆ ಹಾಗೂ ಸ್ಕೌಟ್ ಮಾಸ್ಟರ್ ಆದ ಶ್ರೀಮತಿ ನಮಿತಾವರವರು "ನಿರಂತರ ಯೋಗಾಭ್ಯಾಸದಿಂದ ನಾವೆಲ್ಲರೂ ಆರೋಗ್ಯವನ್ನು ಹೇಗೆ ಕಾಪಾಡಬಹುದೆಂದು ಮನದಟ್ಟುಪಡಿಸಿದರು".

* ಜೂನ್ 21ರಂದು ವಿಶ್ವಯೋಗ ಮತ್ತು ವಿಶ್ವ ಪರಿಸರ ದಿನಾಚರಣೆಗಳು ಹಾಗೂ 2019-20ನೇ ಸಾಲಿನ ವಾರ್ಷಿಕ ಕಾರ್ಯಕ್ರಮಗಳ ಯೋಜನೆ ಪುಸ್ತಕ ಬಿಡುಗಡೆ ಈ ಎಲ್ಲಾ ಕಾರ್ಯಕ್ರಮಗಳನ್ನು ಸಂಯೋಜಿಸಿ ಸ್ಥಳೀಯ ಸಂಸ್ಥೆ ಮೂಡಬಿದ್ರೆ ವ್ಯಾಪ್ತಿಯಲ್ಲಿ ಬರುವ ಸ್ಕೌಟ್ಸ್-ಗೈಡ್ಸ್ ಘಟಕಗಳಿರುವ ಶಾಲೆಗಳಿಂದ ಬಂದ 15 ಶಿಕ್ಷಕರು, 90 ಸ್ಕೌಟ್ಸ್-ಗೈಡ್ಸ್‌ಗಳನ್ನು ಸೇರಿಸಿಕೊಂಡು ರೋಟರಿ ಸಂಮಿಲನ ಸಭಾಭವನದಲ್ಲಿ ಆಚರಿಸಲಾಯಿತು. ಶ್ರೀ ನವೀನ್ ಚಂದ್ರ, ಹೆಚ್.ಡಬ್ಲ್ಯೂ.ಬಿ (ಸ್ಕೌ) ಪ್ರಾಸ್ತಾವಿಕ ಮಾತುಗಳನ್ನಾಡಿ ಈ ಕಾರ್ಯಕ್ರಮಗಳ ಮಹತ್ವವನ್ನು ತಿಳಿಸಿದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ ಸ್ಥಳೀಯ ಮತ್ತು ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರು, ಎ.ಡಿ.ಸಿ.(ಸ್ಕೌ) ಆಗಿರುವ ರೋಟರಿ

ಶಿಕ್ಷಣ ಸಂಸ್ಥೆಯ ಪ್ರಾಂಶುಪಾಲರಾದ ಶ್ರೀ ವಿನ್ಸೆಂಟ್ ಡಿಕೋಸ್ತರವರು ದೀಪ ಬೆಳಗಿಸಿ ಚಾಲನೆ ನೀಡಿದರು. 2019–20ನೇ ಸಾಲಿನ ವಾರ್ಷಿಕ ಕಾರ್ಯಕ್ರಮಗಳ ಯೋಜನೆ ಪುಸ್ತಕವನ್ನು ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ವಸಂತ್ ಎ.ಎಲ್.ಟಿ. (ಸ್ಕೌಟ್ಸ್) ಬಿಡುಗಡೆಗೊಳಿಸಿ ಪುಸ್ತಕದ ಉಪಯುಕ್ತತೆಯನ್ನು ವಿವರಿಸಿ, ಅದರಂತೆ ಎಲ್ಲಾ ಘಟಕಗಳು ಕಾರ್ಯಾಚರಿಸುವಂತೆ ಕರೆ ನೀಡಿದರು. ಗಿಡಗಳನ್ನು ನೂತನ ಕುಂಡಗಳಲ್ಲಿ ನೆಟ್ಟು ನೀರೆರೆಯುವ ಮೂಲಕ ಸ್ಕೌಟ್–ಗೈಡ್‌ಗಳೊಂದಿಗೆ ಶ್ರೀಮತಿ ಭಾರತಿ ಎಸ್. ನಾಯಕ್, ಎ.ಎಲ್.ಟಿ.(ಕಬ್) ಮತ್ತು ಶ್ರೀಮತಿ ಸಂಧ್ಯಾ ಶೆಣೈ, ಎ.ಎಲ್.ಟಿ.(ಬುಲ್–ಬುಲ್) ಪರಿಸರ ದಿನಾಚರಣೆಯನ್ನು ಸಾಂಕೇತಿಕವಾಗಿ ನಡೆಸಿಕೊಟ್ಟರು. ಶ್ರೀ ವಿನ್ಸೆಂಟ್ ಡಿಕೋಸ್ತರವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಮೂಡಬಿದ್ರೆ ಸ್ಥಳೀಯ ಸಂಸ್ಥೆಯನ್ನು ದ.ಕ. ಜಿಲ್ಲೆಯಲ್ಲಿ ಪ್ರಥಮ ಸ್ಥಾನಕ್ಕೆ ಕೊಂಡೊಯ್ಯಬೇಕೆಂಬ ಕರೆಯನ್ನು ನೀಡಿ ಈ ನಿಟ್ಟಿನಲ್ಲಿ ಎಲ್ಲಾ ಘಟಕಗಳ ನಾಯಕರು ಮತ್ತು ಸಂಸ್ಥೆಗಳ ಮುಖ್ಯಸ್ಥರ ಸಹಕಾರವನ್ನು ಕೋರಿದರು. ಸಭಾ ಕಾರ್ಯಕ್ರಮದ ಬಳಿಕ ಯೋಗ ಶಿಕ್ಷಕ ಶ್ರೀ ನವೀನ್ ಚಂದ್ರ ಅಂಬೂರಿ ಸ್ಕೌಟ್–ಗೈಡ್‌ಗಳಿಗೆ ಯೋಗದ ಮಹತ್ವವನ್ನು ತಿಳಿಸಿ ಸೂರ್ಯನಮಸ್ಕಾರ ಮತ್ತು ಪ್ರಾಣಾಯಾಮವನ್ನು ಪ್ರಾಯೋಗಿಕವಾಗಿ ಸ್ಕೌಟ್ಸ್–ಗೈಡ್ಸ್‌ಗಳಿಂದ ಮಾಡಿಸಿದರು. ಪ್ರಾರಂಭದಲ್ಲಿ ಶ್ರೀ ಕೃಷ್ಣಮೂರ್ತಿ ಹೆಚ್.ಡಬ್ಲ್ಯೂ.ಬಿ. (ಸ್ಕೌಟ್) ಸ್ವಾಗತಿಸಿ, ಶ್ರೀ ಶಂಕರ ಭಟ್, ಹೆಚ್.ಡಬ್ಲ್ಯೂ.ಬಿ. (ಸ್ಕೌಟ್) ಕಾರ್ಯಕ್ರಮವನ್ನು ನಿರೂಪಿಸಿ ಧನ್ಯವಾದ ಸಮರ್ಪಿಸಿದರು.

* ಜೂನ್ 21 ರಂದು ಸ್ಥಳೀಯ ಸಂಸ್ಥೆ ವಿಟ್ಲ ಇದರ ವತಿಯಿಂದ ಯೋಗ ಮತ್ತು ಪರಿಸರ ದಿನಾಚರಣೆ ಹಾಗೂ 2019–20ನೇ ವಾರ್ಷಿಕ ಯೋಜನಾ ಪುಸ್ತಕ ಬಿಡುಗಡೆ ಕಾರ್ಯಕ್ರವನ್ನು ವಿಟ್ಲದ ಸಂತ ರೀಟಾ ಶಾಲೆಯಲ್ಲಿ ಆಚರಿಸಲಾಯಿತು. ಅಧ್ಯಕ್ಷತೆಯನ್ನು ಸ್ಥಳೀಯ ಸಂಸ್ಥೆಯ ಉಪಾಧ್ಯಕ್ಷರಾದ ಶ್ರಿ ಸುದರ್ಶನ ಪಡಿಯಾರ್ ವಹಿಸಿದ್ದರು. ಸಂತ ರೀಟಾ ವಿದ್ಯಾ ಸಂಸ್ಥೆಯ ಸಹ ಕಾರ್ಯದರ್ಶಿಗಳಾದ ಫಾ॥ ಎರಿಕ್ ಕ್ರಾಸ್ತಾ ಗಿಡಕ್ಕೆ ನೀರೆರೆಯುವ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿದರು. ವೇದಿಕೆಯಲ್ಲಿ ಆಡಳಿತ ಮಂಡಳಿಯ ಸದಸ್ಯರಾದ ಶ್ರೀ ಚಾರ್ಲ್ಸ್ ಸಿಕ್ವೇರಾ, ಮುಖ್ಯ ಶಿಕ್ಷಕರಾದ ಫಾ॥ ಸುನಿಲ್ ಪಿಂಟೋ ಉಪಸ್ಥಿತರಿದ್ದರು. ಅತಿಥಿಗಳನ್ನು ಗೈಡ್ ಕ್ಯಾಪ್ಟನ್ ಶ್ರೀಮತಿ ಎವ್ಲಿನ್ ಹೆಲೆನ್ ಪುಡ್ತಾದೊ ಸ್ವಾಗತಿಸಿದರು. ಸ್ಕೌಟ್ ಮಾಸ್ಟರ್ ಶ್ರೀಮತಿ ಸಂಧ್ಯಾರವರು ನಿರ್ವಹಿಸಿದರು.

* ಜುಲೈ 3ರಂದು ವಿದ್ಯಾರ್ಥಿಗಳಲ್ಲಿ ಶಿಸ್ತು, ಸಂಯಮ ಬೆಳೆಸಲು ರೋವರ್ಸ್ ರೇಂಜರ್ಸ್ ಘಟಕ ಸಹಕಾರಿ ಎಂಬುದಾಗಿ ಜಿಲ್ಲಾ ಮುಖ್ಯ ಆಯುಕ್ತ ಡಾ. ಎನ್.ಜಿ. ಮೋಹನ್, ಗೋವಿಂದದಾಸ ಪದವಿ ಪೂರ್ವ ಕಾಲೇಜಿನಲ್ಲಿ ನಡೆದ ರೋವರ್ಸ್–ರೇಂಜರ್ಸ್ ಘಟಕದ ಉದ್ಘಾಟನೆಯನ್ನು ನಡೆಸಿ ತಮ್ಮ ಅಭಿಪ್ರಾಯ ತಿಳಿಸಿದರು. ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ರಾಮಶೇಷ ಶೆಟ್ಟಿ, ಜಿಲ್ಲಾ ಖಜಾಂಚಿ ಶ್ರೀ ವಾಸುದೇವ ಬೋಳೂರು, ಸ್ಥಳೀಯ ಘಟಕಗಳ ಕಾರ್ಯದರ್ಶಿಯಾಗಿರುವ ಸಿಸ್ಟರ್ ಲೊಲಿಟ, ಗೋವಿಂದದಾಸ ಪದವಿ ಪೂರ್ವ ಕಾಲೇಜಿನ ನಿರ್ದೇಶಕರಾದ ಶ್ರೀ ವೈ.ವಿ. ರತ್ನಾಕರ್‌ರಾವ್, ಕಾಲೇಜಿನ ಉಪ ಪ್ರಾಂಶುಪಾಲೆ ಶ್ರೀಮತಿ ಸುನೀತಾ ಕೆ. ಸ್ಥಳೀಯ ಘಟಕದ ಉಪ ಆಯುಕ್ತರಾದ ಶ್ರೀ ಕಾರ್ಣಿಕ್, ಸ್ಥಳೀಯ ಘಟಕದ ಉಪಾಧ್ಯಕ್ಷರಾದ ಶ್ರೀ ಎಮ್. ಶ್ರೀಕಾಂತ್ ಚಿಪ್ಲುಂಕರ್, ಕಾಲೇಜಿನ ವಿದ್ಯಾರ್ಥಿ ಕ್ಷೇಮ ಪಾಲಕಿ ಶ್ರೀಮತಿ ಜಯಂತಿ ಅಮೀನ್ ಉಪಸ್ಥಿತರಿದ್ದು ಶುಭ ಹಾರೈಸಿದರು.

ವಿದ್ಯಾದಾಯಿನಿ ಆಂಗ್ಲ ಮಾಧ್ಯಮ ಶಾಲೆಯ ಸ್ಕೌಟ್–ಗೈಡ್‌ನ ನಾಯಕರಾಗಿರುವ ಶ್ರೀ ಸುಹಾಸ್, ಗೋವಿಂದದಾಸ ಪದವಿ ಕಾಲೇಜಿನ ರೇಂಜರ್ಸ್ ಲೀಡರ್ ಶ್ರೀಮತಿ ಶಿಲ್ಪ ಹಾಗೂ ಘಟಕದ ವಿದ್ಯಾರ್ಥಿಗಳು ಪಾಲ್ಗೊಂಡಿದ್ದರು.

ಕು॥ ಜ್ಯೋತಿಶ್ರೀ ಕಾರ್ಯಕ್ರಮ ನಿರೂಪಣೆ ಮಾಡಿದರು. ಶ್ರೀಮತಿ ಶೈಲಜಾ ಸ್ವಾಗತಿಸಿದರು. ಕು॥ ಧನ್ಯಾ ವಂದನಾರ್ಪಣೆ ಮಾಡಿದರು. ಶ್ರೀಮತಿ ಜಯಶ್ರೀ ಸ್ಕೌಟ್–ಗೈಡ್‌ನ ಒಂದು ಪಕ್ಷಿನೋಟವನ್ನು ವಿವರಿಸಿದರು. ದಕ್ಷಿಣ ಕನ್ನಡ ಜಿಲ್ಲಾ ಸ್ಕೌಟ್–ಗೈಡ್ ಸಂಘಟಕರಾದ ಶ್ರೀ ಕೆ. ಭರತ್‌ರಾಜ್ ವಿದ್ಯಾರ್ಥಿಗಳಿಗೆ ಮಾಹಿತಿ ಶಿಬಿರ ನಡೆಸಿಕೊಟ್ಟರು.

* ಜೂನ್ 2ರಂದು ಸ್ಥಳೀಯ ಸಂಸ್ಥೆ ಬೆಳ್ತಂಗಡಿಯ ವತಿಯಿಂದ ಯೋಗ ದಿನಾಚರಣೆಯನ್ನು ಎಸ್.ಡಿ.ಎಂ. ಆಂಗ್ಲ ಮಾಧ್ಯಮ ಶಾಲೆ ಬೆಳ್ತಂಗಡಿಯಲ್ಲಿ ಆಚರಿಸಲಾಯಿತು. ಭಾರತ್ ಸ್ಕೌಟ್ಸ್–ಗೈಡ್ಸ್‌ನ ಕಬ್–ಬುಲ್‌ಬುಲ್, ಸ್ಕೌಟ್–ಗೈಡ್‌ಗಳು ಈ ಯೋಗ ದಿನಾಚರಣೆಯ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು.

## ದಾವಣಗೆರೆ

ಜೂನ್ 13 ರಂದು ಸೆಂಟ್ ಪಾಲ್ಸ್ ಪಿಯು ಕಾಲೇಜು ವತಿಯಿಂದ ವಿಶ್ವ ಪರಿಸರ ದಿನಾಚರಣೆ ಅಂಗವಾಗಿ ಸ್ಕೌಟ್ಸ್-ಗೈಡ್ಸ್‌ಗಳಿಂದ ಸಾರ್ವಜನಿಕರಿಗೆ ಸಸಿ ವಿತರಣೆ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ಈ ಕಾರ್ಯಕ್ರಮದ ಅತಿಥಿಗಳಾಗಿ ಕಾಲೇಜು ಆಡಳಿತಾಧಿಕಾರಿ ಸಿಸ್ಟರ್ ಆಲ್ಬಿನ, ಪ್ರಾಂಶುಪಾಲರಾದ ಶ್ರೀ ಮೇಘನಾಥನ್ ಇವರು ಭಾಗವಹಿಸಿದ್ದರು. ಈ ಸಂದರ್ಭದಲ್ಲಿ ಸ್ಕೌಟ್ ಮಾಸ್ಟರ್ ಶ್ರೀ ಟಿ.ಎಂ. ರವೀಂದ್ರಸ್ವಾಮಿ ಉಪಸ್ಥಿತರಿದ್ದರು.



* ಜೂನ್ 16 ರಂದು ಶ್ರೀ ತರಳಬಾಳು ಜಗದ್ಗುರು ವಸತಿ ಶಾಲೆ, ಸೆಂಟ್ ಪಾಲ್ಸ್ ಪಿಯು ಕಾಲೇಜು, ಮಾಗನೂರು ಬಸಪ್ಪ ಶಾಲೆ, ಲೂರ್ಡ್ಸ್ ಬಾಯ್ಸ್ ಶಾಲೆ, ಬಾಪೂಜಿ ಓಪನ್ ಸ್ಕೌಟ್ ಟ್ರೂಪ್ ಮತ್ತು ಮದರ್ ತೆರೆಸಾ ಓಪನ್ ಗೈಡ್ ಕಂಪನಿ ವತಿಯಿಂದ ವಿಶ್ವ ಪರಿಸರ ದಿನಾಚರಣೆ ಅಂಗವಾಗಿ ಸ್ಕೌಟ್ಸ್-ಗೈಡ್ಸ್‌ಗಳಿಂದ ಸಾರ್ವಜನಿಕರಿಗೆ ಸಸಿ ವಿತರಣೆ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ಈ ಕಾರ್ಯಕ್ರಮದ ಅತಿಥಿಗಳಾಗಿ ಶ್ರೀ ಕಿರಣ್ ಕುಮಾರ್ ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಸರ್ಕಲ್ ಇನ್ಸ್‌ಪೆಕ್ಟರ್ ಇವರು ಭಾಗವಹಿಸಿದ್ದರು. ಈ ಸಂದರ್ಭದಲ್ಲಿ ಸ್ಕೌಟ್ ಮಾಸ್ಟರ್ ಗಳಾದ ಶ್ರೀ ಟಿ.ಎಂ. ರವೀಂದ್ರಸ್ವಾಮಿ, ಶ್ರೀ ಕೆ.ವಿ. ಸಿದ್ದೇಶ್, ಶ್ರೀ ಲೋಹಿತ್ ಕುಮಾರ್, ಗೈಡ್ ಕ್ಯಾಪ್ಟನ್ ಶ್ರೀಮತಿ ರಮ್ಯ ಉಪಸ್ಥಿತರಿದ್ದರು.

* ಜೂನ್ 18 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ದಾವಣಗೆರೆ ಜಿಲ್ಲಾ ಸಂಸ್ಥೆ ವತಿಯಿಂದ ಪ್ರಾರಂಭಿಕ ಶಿಬಿರವನ್ನು ಆಯೋಜಿಸಲಾಗಿತ್ತು. ಈ ಶಿಬಿರದಲ್ಲಿ ದಾವಣಗೆರೆ ಜಿಲ್ಲೆಯ ವಿವಿಧ ಪದವಿ ಪೂರ್ವ ಕಾಲೇಜುಗಳ 20 ಉಪನ್ಯಾಸಕರು ಭಾಗವಹಿಸಿದ್ದರು. ಈ ಶಿಬಿರದ ನಾಯಕತ್ವವನ್ನು ಶ್ರೀ ಎನ್.ಡಿ. ತಮ್ಮಣ್ಣನವರ್ ವಹಿಸಿದ್ದರು. ಸಂಪನ್ಮೂಲ ವ್ಯಕ್ತಿಗಳಾಗಿ ಡಾ॥ ಶಕುಂತಲಾ, ರೇಂಜರ್ ಲೀಡರ್, ಶ್ರೀಮತಿ ಅಮೂಲ್ಯ, ರೇಂಜರ್ಸ್ ಲೀಡರ್, ಶ್ರೀ ಹುಸೇನ್‌ಪೀರ್, ಸ್ಕೌಟ್ ಮಾಸ್ಟರ್, ಶ್ರೀಮತಿ ಅಶ್ವಿನಿ, ಸ್ಕೌಟ್ ಗೈಡ್ ಸ್ವಯಂ ಸೇವಕರು ಕಾರ್ಯನಿರ್ವಹಿಸಿದರು.

* ಜೂನ್ 21ರಂದು ಭಾರತ್ ಸ್ಕೌಟ್ಸ್-ಗೈಡ್ಸ್, ದಾವಣಗೆರೆ ಜಿಲ್ಲಾ ಸಂಸ್ಥೆ ವತಿಯಿಂದ ವಿಶ್ವ ಯೋಗ ಮತ್ತು ವಿಶ್ವ ಪರಿಸರ ದಿನಾಚರಣೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಮುರುಘರಾಜೇಂದ್ರ ಜೆ. ಚಿಗಟೇರಿ, ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಎ.ಪಿ. ಷಡಾಕ್ಷರಪ್ಪ, ಜಿಲ್ಲಾ ತರಬೇತಿ ಆಯುಕ್ತ ಶ್ರೀ ಎನ್.ಡಿ. ತಮ್ಮಣ್ಣನವರ್, 250 ಕಬ್ಸ್-ಬುಲ್ಸ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್‌ಗಳು ಸ್ಕೌಟರ್ಸ್-ಗೈಡರ್ಸ್ ಹಾಗೂ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಧ.ರಾ.ಮ. ಸ್ಕೌಟ್ ಭವನದ ಆವರಣದಲ್ಲಿ ಸಾಮೂಹಿಕವಾಗಿ ಯೋಗ ಮಾಡಿದರು.

ವಿಶ್ವಪರಿಸರ ದಿನಾಚರಣೆ ಅಂಗವಾಗಿ ನಗರದ ಕಾಸಲ್ ವಿಠಲ್ ಶೆಟ್ಟಿ ಉದ್ಯಾನವನದಲ್ಲಿ ಕಬ್ಸ್-ಬುಲ್‌ಬುಲ್ಸ್, ಸ್ಕೌಟ್ಸ್ ಗೈಡ್ಸ್‌ಗಳಿಗೆ ಚಿತ್ರಕಲಾ ಸ್ಪರ್ಧೆಯನ್ನು ಆಯೋಜಿಸಲಾಗಿತ್ತು.

* ಜುಲೈ 3 ರಂದು ಆರ್.ವಿ.ಜಿ.ಕೆ. ಶಾಲೆಯಲ್ಲಿ ವಿಶ್ವ ಪರಿಸರ ದಿನಾಚರಣೆ ಅಂಗವಾಗಿ ಪರಿಸರ ಜಾಗೃತಿ ಮೂಡಿಸಲು ಸೈಕಲ್ ಜಾಥಾ ಕಾರ್ಯಕ್ರವನ್ನು ಆಯೋಜಿಸಲಾಗಿತ್ತು. ದಾವಣಗೆರೆ ಉತ್ತರ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಜಿ. ಕೊಟ್ರೇಶ್ ಜಾಥಾವನ್ನು ಉದ್ಘಾಟಿಸಿದರು. ಶಾಲಾ ಆಡಳಿತ ಮಂಡಳಿ ಸದಸ್ಯರು ಸ್ಕೌಟ್ಸ್‌ಗಳಿಗೆ ಶುಭ ಹಾರೈಸಿದರು.



ಈ ಕಾರ್ಯಕ್ರಮವು ಜಿಲ್ಲಾ ಸಂಸ್ಥೆ ವತಿಯಿಂದ ಶ್ರೀಮತಿ ಅಶ್ವಿನಿ, ಜೆ. ಸ್ಕೌಟ್-ಗೈಡ್ ಸ್ವಯಂ ಸೇವಕರು ಭಾಗವಹಿಸಿದ್ದರು. ಆರ್.ವಿ.ಜಿ.ಕೆ ಶಾಲೆಯ 30 ಸ್ಕೌಟ್ಸ್‌ಗಳು ಭಾಗವಹಿಸಿದ್ದರು. ಕಾರ್ಯಕ್ರಮದ ನೇತೃತ್ವವನ್ನು ಸ್ಕೌಟ್ ಮಾಸ್ಟರ್ ಶ್ರೀ ಸುರೇಶ್ ವಹಿಸಿದ್ದರು.

* ಜುಲೈ 10ರಂದು ಧ.ರಾ.ಮ ಸ್ಕೌಟ್ ಭವನದಲ್ಲಿ 2019-2020ನೇ ಸಾಲಿನ ರೋವರ್-ರೇಂಜರ್‌ಗಳ ಕಾರ್ಯಚಟುವಟಿಕೆಗಳ ಬಗ್ಗೆ ಚರ್ಚಿಸಲು ಜಿಲ್ಲಾ ಮಟ್ಟದ ರೋವರ್ ಸ್ಕೌಟ್ ಲೀಡರ್ ಮತ್ತು ರೇಂಜರ್ ಲೀಡರ್‌ಗಳ ಸಭೆಯನ್ನು ಆಯೋಜಿಸಲಾಗಿತ್ತು. ಜಿಲ್ಲೆಯ 23 ರೋವರ್ ಸ್ಕೌಟ್ ಲೀಡರ್ ಮತ್ತು ರೇಂಜರ್ ಲೀಡರ್‌ಗಳು ಸಭೆಯಲ್ಲಿ ಭಾಗವಹಿಸಿದ್ದರು. ಈ ಸಂದರ್ಭದಲ್ಲಿ ರಾಜ್ಯ ಸಂಸ್ಥೆ 2019-20ನೇ ಸಾಲಿನ ವಾರ್ಷಿಕ ಕಾರ್ಯಕ್ರಮಗಳ ಯೋಜನಾ ಪುಸ್ತಕವನ್ನು ಸಭೆಯಲ್ಲಿ ಹಾಜರಿದ್ದವರಿಗೆ ವಿತರಿಸಲಾಯಿತು. ಸಭೆಯ ನೇತೃತ್ವವನ್ನು ಶ್ರೀ ಎನ್.ಡಿ. ತಮ್ಮಣ್ಣನವರ್, ಜಿಲ್ಲಾ ಸ್ಕೌಟ್ ತರಬೇತಿ ಆಯುಕ್ತರು ಇವರು ವಹಿಸಿದ್ದರು.

* ಜುಲೈ 12ರಂದು ಹೊನ್ನಾಳಿ ತಾಲ್ಲೂಕು ಸ್ಥಳೀಯ ಸಂಸ್ಥೆ ವತಿಯಿಂದ ಪ್ರಾರಂಭಿಕ ಶಿಬಿರವನ್ನು ಆಯೋಜಿಸಲಾಗಿತ್ತು. ಈ ಶಿಬಿರದಲ್ಲಿ ತಾಲ್ಲೂಕಿನ ಸುಮಾರು 120 ಶಿಕ್ಷಕ-ಶಿಕ್ಷಕಿಯರು ಭಾಗವಹಿಸಿದ್ದರು. ಶಿಬಿರದ ನಾಯಕತ್ವವನ್ನು ಶ್ರೀ ಆರ್.ಟಿ. ಗಣೇಶ್, ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳು ವಹಿಸಿದ್ದರು ಹಾಗೂ ಜಿಲ್ಲಾ ಸಂಸ್ಥೆಯ ವತಿಯಿಂದ ಶ್ರೀಮತಿ ಜೆ.ಅಶ್ವಿನಿ, ಎಸ್.ಜಿ.ವಿ. ಇವರು ಭಾಗವಹಿಸಿದ್ದರು.

* ಜುಲೈ 13ರಂದು ಸೆಂಟ್ ಪಾಲ್ಸ್ ಕಾನ್ವೆಂಟ್ ಶಾಲೆಯಲ್ಲಿ ಬುಲ್‌ಬುಲ್ಸ್ ಮತ್ತು ಗೈಡ್ಸ್‌ಗಳಿಂದ ಫ್ಯಾನ್ಸಿ ಫುಡ್ ಮೇಳವನ್ನು ಆಯೋಜಿಸಲಾಗಿತ್ತು. ಈ ಕಾರ್ಯಕ್ರಮದಲ್ಲಿ 50 ಬುಲ್‌ಬುಲ್ಸ್ ಮತ್ತು ಗೈಡ್ಸ್‌ಗಳು ಭಾಗವಹಿಸಿದ್ದರು. ಗೈಡ್ ಕ್ಯಾಪ್ಟನ್ ಶ್ರೀಮತಿ ನಯನ ಏಸುಪ್ರಿಯ, ಶ್ರೀಮತಿ ಹೆಚ್.ಎಂ. ರಜನಿ, ಸ್ಕೌಟ್ ಮಾಸ್ಟರ್ ಶ್ರೀ ರವೀಂದ್ರಸ್ವಾಮಿ, ಶ್ರೀಮತಿ ರೇಖಾ ಬಾಯಿ ಫ್ಲಾಕ್ ಲೀಡರ್ ಉಪಸ್ಥಿತರಿದ್ದರು.

* ಜುಲೈ 13ರಂದು ಸರ್ಕಾರಿ ಹಿರಿಯ ಪ್ರಾಥಮಿಕ ಶಲೆ, ಯರಲಕಟ್ಟೆ, ಜಗಳೂರು ಶಾಲೆಯ ಗೈಡ್ಸ್‌ಗಳಿಂದ ಗದ್ದೆಯಲ್ಲಿ ನಾಟಿ ಮಡುವ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ಈ ಕಾರ್ಯಕ್ರಮದ ನಾಯಕತ್ವವನ್ನು ಗೈಡ್ ಕ್ಯಾಪ್ಟನ್ ಶ್ರೀಮತಿ ವಜ್ರಗಂಗಮ್ಮ, ಎ.ಎಲ್.ಟಿ. (ಗೈ) ವಹಿಸಿದ್ದರು.

* ಜುಲೈ 13ರಂದು 24ನೇ ವಿಶ್ವ ಸ್ಕೌಟ್ ಜಾಂಬೂರಿಯಲ್ಲಿ ಭಾಗವಹಿಸುತ್ತಿರುವ ದಾವಣಗೆರೆ ಜಿಲ್ಲೆಯ ಸ್ಕೌಟ್ಸ್-ಗೈಡ್ಸ್ ಗಳಿಗೆ ಶ್ರೀ ಕಾಂತಿಲಾಲ್ ಪಿ. ಜೈನ್, ಜಿಲ್ಲಾ ಸ್ಥಾನಿಕ ಆಯುಕ್ತರು ಮತ್ತು ನಮ್ಮ ಜಿಲ್ಲೆಯವರಾದ ಶ್ರೀಮತಿ ಸಿ. ಮಂಜುಳ ರಾಜ್ಯ ಸಂಘಟನಾ ಆಯುಕ್ತರು(ಗೈ) ಇವರಿಗೆ ದಾವಣಗೆರೆ ಜಿಲ್ಲಾ ಸಂಸ್ಥೆ ವತಿಯಿಂದ ಬೀಳ್ಕೊಡುಗೆ ಸಮಾರಂಭವನ್ನು ಆಯೋಜಿಸಲಾಗಿತ್ತು. ಸಮಾರಂಭದಲ್ಲಿ ಜಿಲ್ಲಾ ಸಂಸ್ಥೆ ಉಪಾಧ್ಯಕ್ಷರಾದ ಶ್ರೀ ಕೆ.ಜಿ. ಶರಣಪ್ಪ, ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಮುರುಘರಾಜೇಂದ್ರ ಜೆ. ಚಿಗಟೇರಿ, ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಎ.ಪಿ. ಷಡಾಕ್ಷರಪ್ಪ, ಜಿಲ್ಲಾ ಖಜಾಂಚಿಗಳಾದ ಶ್ರೀ ಬೂಸ್ನೂರು ವಿಶ್ವನಾಥ್ ಹಾಗೂ ಇತರೆ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಉಪಸ್ಥಿತರಿದ್ದರು.





## ಧಾರವಾಡ

ಜೂನ್ 20 ರಂದು ನಡೆದ ಜಿಲ್ಲಾ ಯೋಗ ನಡಿಗೆಯಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ.ಎಂ. ಲೋಂಡೆ ಹಾಗೂ ಜಿಲ್ಲೆಯ ವಿವಿಧ ಶಾಲೆಯ ಮತ್ತು ಕಾಲೇಜುಗಳಿಂದ 150 ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ಸೇರಿ ಭಾಗವಹಿಸಿದ್ದರು. ಸಾರ್ವಜನಿಕರಲ್ಲಿ ಯೋಗದ ಅರಿವು ಮೂಡಿಸಲು ಪ್ರಯತ್ನಿಸಿದರು.

* ಜೂನ್ 20ರಂದು ಜಿಲ್ಲಾ ಸಂಸ್ಥೆ ಧಾರವಾಡ ಆವರಣದಲ್ಲಿ ಜಿಲ್ಲಾ ಪ್ರಗತಿ ಪರಿಶೀಲನಾ ಸಭೆಯನ್ನು ನಡೆಸಲಾಯಿತು. ಜಿಲ್ಲೆಯ ವಿವಿಧ ತಾಲೂಕಗಳ ಕಾರ್ಯದರ್ಶಿಗಳು, ಸಹಕಾರ್ಯದರ್ಶಿಗಳು, ಕೋಶಾಧಿಕಾರಿಗಳು ಮತ್ತು ವೃಕ್ಷಮಣಿಧಾರಕರು ನೋಡಲ್ ಅಧಿಕಾರಿಗಳು, ಜಿಲ್ಲಾ ಕಾರ್ಯಕಾರಿ ಸಮಿತಿ ಸದಸ್ಯರು, ಜಿಲ್ಲೆಯ ಎಲ್ಲ ಪದಾಧಿಕಾರಿಗಳು ಒಟ್ಟು 63 ಸದಸ್ಯರು ಭಾಗವಹಿಸಿದ್ದರು.

ಸಭೆಯನ್ನು ಜಿಲ್ಲಾ ಉಪನಿರ್ದೇಶಕರಾದ ಶ್ರೀ ಗಜಾನನ ಮನ್ನಿಕೇರಿಯವರು ಸಸಿಗೆ ನೀರು ಎರೆಯುವುದರೊಂದಿಗೆ ಉದ್ಘಾಟನೆ ಮಾಡಿ ಸಭೆಯ ಕಾರ್ಯಕಲಾಪಗಳು ಯಶಸ್ವಿಯಾಗಲೆಂದು ಹಾಗೂ ಹೊಸ ಹೊಸ ವಿಚಾರಗಳೊಂದಿಗೆ ಸ್ಕೌಟ್ಸ್-ಗೈಡ್ಸ್ ಸಂಸ್ಥೆಗೆ ಹೊಸ ಚೈತನ್ಯವನ್ನು ತುಂಬಲೆಂದು ಹಾರೈಸಿದರು.

ರಾಜ್ಯ ಸಂಸ್ಥೆಯ ವಾರ್ಷಿಕ ಯೋಜನೆಯ ಪುಸ್ತಕವನ್ನು ಶ್ರೀ ಗಜಾನನ ಮನ್ನಿಕೇರಿಯವರು ಬಿಡುಗಡೆ ಮಾಡಿದರು. ರಾಜ್ಯದ ವೈವಿಧ್ಯಮಯ ಚಟುವಟಿಕೆಗಳಿಂದ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯು ವಿಶ್ವದ ತುಂಬೆಲ್ಲಾ ಪಸರಿಸಲಿ ಎಂದು ಹಾರೈಸಿದರು.



ರಾಜ್ಯ ಸಂಘಟನಾ ಗೈಡ್ ಆಯುಕ್ತರಾದ ಶ್ರೀಮತಿ ಸಿ. ಮಂಜುಳಾ ಹಾಗೂ ವಿಭಾಗೀಯ ಆಯುಕ್ತರಾದ ಶ್ರೀಮತಿ ಬಿ.ಡಿ. ಶಾಂತಾ ಭಾಗವಹಿಸಿ ಮಾರ್ಗದರ್ಶನ ಮಾಡಿದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ.ಎಂ. ಲೋಂಡೆ, ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ವಿ.ವಿ. ಕಟ್ಟಿ ಹಾಗೂ ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು.

## ಗದಗ

ಜೂನ್ 21ರಂದು ಗದಗ ಪಬ್ಲಿಕ್ ಶಾಲೆಯಲ್ಲಿ ವಿಶ್ವ ಪರಿಸರ ಹಾಗೂ ಯೋಗ ದಿನಾಚರಣೆ ಮತ್ತು ಭಾರತ್ ಸ್ಕೌಟ್ಸ್-ಗೈಡ್ಸ್ ವಾರ್ಷಿಕ ವರದಿ ಕೈಪಿಡಿ ಬಿಡುಗಡೆ ಸಮಾರಂಭ ಏರ್ಪಡಿಸಲಾಯಿತು.

ಈ ಸಮಾರಂಭದಲ್ಲಿ ಗದಗ ಪಬ್ಲಿಕ್ ಶಾಲೆಯ ಮುಖ್ಯೋಪಾಧ್ಯಾಯನಿ ಡಾ॥ ಎಸ್.ವಿ. ಗೌರಿ ಅವರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಗದಗ ಶಹರದ ಮಾನ್ಯ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಕೆಳದಿಮಠ ಅವರು ಸಮಾರಂಭದ ಮುಖ್ಯ ಅತಿಥಿಗಳಾಗಿದ್ದರು. ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಜಿ.ಎಚ್. ಪೂಜಾರರವರು ವಿಶ್ವದಾದ್ಯಂತ ವಿಶ್ವ ಯೋಗ ದಿನಾಚರಣೆ ಪ್ರಾರಂಭವಾಗಲಿಕ್ಕೆ ಭಾರತೀಯರೇ ಕಾರಣ ಎಂದು ಹೇಳಿದರು. ಜಿಲ್ಲಾ






ಆಯುಕ್ತರಾದ ಶ್ರೀಮತಿ ಸುಮಾ ಗರಗ ಅವರು ರಾಸಾಯನಿಕ ಗೊಬ್ಬರಗಳಿಂದ ಬೆಳೆದಂತಹ ಆಹಾರ ತಿಂದು ಕ್ಷೀಣಿಸುತ್ತಿರುವ ಆರೋಗ್ಯವನ್ನು ಯೋಗದಿಂದ ಉತ್ತಮಗೊಳಿಸಿ ಕೊಳ್ಳಬಹುದೆಂದು ಸಲಹೆ ನೀಡಿದರು.

ಸಹಾಯಕ ರಾಜ್ಯ ಸಂಘಟನಾ ಆಯುಕ್ತ ಶ್ರೀ ಎ.ಎಸ್. ಶಿವಕುಮಾರ, ಗದಗ ಶಹರದ ಉಪಾಧ್ಯಕ್ಷ ಶ್ರೀ ಕಿಲಬನ್ನವರ ಪರಿಸರ ಮತ್ತು ಯೋಗದ ಮಹತ್ವದ ಬಗ್ಗೆ ತಿಳಿಸಿದರು.

ಗದಗ ಶಹರದ ಉಪಾಧ್ಯಕ್ಷಿಣಿಂ ಶ್ರೀಮತಿ ಶಿವಲೀಲಾ ಅಕ್ಕಿ ಅವರು ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾರ್ಥಿಗಳು, ಸ್ಕೌಟ್ಸ್-ಗೈಡ್ಸ್ ಸೇರಲಿಕ್ಕೆ ಪ್ರೇರಣೆ ನೀಡಿದರು. ಶ್ರೀಮತಿ ಮಾನ್ವಿ ಅವರು ಮರಗಳ ಮಹತ್ವದ ಬಗ್ಗೆ ಹೇಳುತ್ತಾ ಮಳೆ ಮತ್ತು ಮರಗಳಿಗಿರುವ ಸಂಬಂಧ, ಮಳೆ ಬರಲಿಕ್ಕೆ ಗಿಡಮರಗಳು ಎಷ್ಟು ಮುಖ್ಯ ಎಂಬುದನ್ನು ತಮ್ಮ ಬಾಲ್ಯದ ನೆನಪುಗಳೊಂದಿಗೆ ವಿವರಿಸಿದರು. ಕುಮಾರಿ ನಮ್ರತಾ ಕಣವಿ ಹಾಗು ಶ್ರೀ ವಿನಯ್ ಯಾವಗಲ್ ಕಾರ್ಯಕ್ರಮದ ನಿರೂಪಣೆ ಮಾಡಿದರು. ಕುಮಾರಿ ಸ್ಫೂರ್ತಿ ಪಲ್ಲೇದ ವಂದನಾರ್ಪಣೆ ಮಾಡಿದರು.

* ಜುಲೈ 1ರಂದು ಗದಗ ಶಹರ ತಾಲ್ಲೂಕಿನ ಮಾಹಿತಿ ಶಿಬಿರವನ್ನು ಶಹರ ಬಿ.ಇ.ಓ. ಕಛೇರಿಯಲ್ಲಿ ನಡೆಸಲಾಯಿತು. ಶ್ರೀ ಎಸ್.ಎಸ್. ಕೆಳದಿಮಠ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಅಧ್ಯಕ್ಷತೆ ವಹಿಸಿದ್ದರು. ಅವರು ಮಾತನಾಡುತ್ತ ಗದಗ ಶಹರದಲ್ಲಿ ಎಲ್ಲಾ ಶಾಲೆಗಳಲ್ಲಿ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್ ಕಡ್ಡಾಯವಾಗಿ ಪ್ರಾರಂಭಿಸಬೇಕು ಎಂದು ತಿಳಿಸಿದರು. ಶ್ರೀ ಜಿ.ಹೆಚ್. ಪೂಜಾರ, ಜಿಲ್ಲಾ ಕಾರ್ಯದರ್ಶಿ ಮಾತನಾಡುತ್ತಾ ದಳಗಳು ಕುಂಠಿತವಾಗದ ರೀತಿಯಲ್ಲಿ ಮಾಡಲು ಶಾಲೆಗಳ ಮುಖ್ಯೋಪಾಧ್ಯಾಯರಿಗೆ ಕೋರಿದರು. ಶ್ರೀ ಶಿವುಕುಮಾರ ಎಲ್ಲರಿಗೂ ವಂದನಾರ್ಪಣೆ ಮಾಡಿದರು.



* ಜುಲೈ 5 ರಂದು ರೋಣ ಹಾಗೂ ಗಜೇಂದ್ರಗಡ ತಾಲ್ಲೂಕುಗಳ ಸ್ಥಳೀಯ ಸಂಸ್ಥೆ ವತಿಯಿಂದ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯ ಸಭಾಂಗಣದಲ್ಲಿ ಸ್ಕೌಟರ್ಸ್-ಗೈಡರ್ಸ್ ಸಮಾವೇಶ ಜರುಗಿತು.

ಶ್ರೀ ಎನ್. ನಂಜುಂಡಯ್ಯ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಅಧ್ಯಕ್ಷತೆವಹಿಸಿದ್ದರು. ಅವರು ಮಾತನಾಡುತ್ತ ನನ್ನ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಹೆಚ್.ಪಿ.ಎಸ್., ಹೆಚ್.ಎಸ್ ಶಾಲೆಗಳಲ್ಲಿ 2019-20ರೊಳಗೆ ನೋಂದಣಿ ಕಡ್ಡಾಯ ಹಾಗೂ ಕಾರ್ಯಚಟುವಟಿಕೆಗಳು ಚುರುಕುಗೊಳ್ಳಬೇಕು ಎಂದು ತಿಳಿಸಿದರು. ಮುಖ್ಯ ಅತಿಥಿಗಳಾಗಿ ಶ್ರೀ ಜಿ.ಹೆಚ್. ಪೂಜಾರ, ಜಿಲ್ಲಾ ಕಾರ್ಯದರ್ಶಿ ಮಾತನಾಡುತ್ತ ಸ್ಕೌಟ್ ಮಾಸ್ಟರ್, ಗೈಡ್ ಕ್ಯಾಪ್ಟನ್, ಕಬ್ ಮಾಸ್ಟರ್, ಫ್ಲಾಕ್ ಲೀಡರ್ ರವರುಗಳು ಶಾಲೆಯಲ್ಲಿ ಮುಖ್ಯೋಪಾಧ್ಯಾಯರೊಂದಿಗೆ ಒಳ್ಳೆಯ ಸಂಬಂಧ ಇರಬೇಕು, ವಾರಕ್ಕೊಮ್ಮೆ ತರಗತಿಯನ್ನು ಕಡ್ಡಾಯವಾಗಿ ತೆಗೆದುಕೊಳ್ಳಬೇಕು ಎಂದು ತಿಳಿಸಿದರು. ನಂತರ ಶ್ರೀ ಎ.ಎಸ್. ಶಿವುಕುಮಾರ್, ಎ.ಎಸ್.ಓ.ಸಿ. ಮಾತನಾಡುತ್ತ ಪ್ರವೇಶದಿಂದ ರಾಷ್ಟ್ರಪತಿ ಪುರಸ್ಕಾರದ ವರೆಗೆ ಹೇಗೆ ತಯಾರಿ ಮಾಡಬೇಕು ಎಂಬುದನ್ನು ವಿಸ್ತಾರವಾಗಿ ತಿಳಿಸಿದರು.

ಸಮಾವೇಶದಲ್ಲಿ ಶ್ರೀ ಐ.ವಿ. ಕರಣಿ, ಶ್ರೀ ಸೂಂಠಿ, ಶ್ರೀ ಹಟ್ಟಿಮಗಿ, ಶ್ರೀ ಕಂದಗಲ್ಲ, ಶ್ರೀಮತಿ ಬಿ.ಟಿ. ಹೊಸಮನಿ ಶ್ರೀಮತಿ ಎ.ಎಸ್. ನರಗುಂದ, ಶ್ರೀಮತಿ ಜಿ.ಪಿ. ಹಿರೇಮಠ ಹಾಗೂ ರೋಣ ಮತ್ತು ಗಜೇಂದ್ರಗಡ ತಾಲ್ಲೂಕುಗಳ ತಾಲ್ಲೂಕುಗಳ ಸ್ಕೌಟರ್ಸ್-ಗೈಡರ್ಸ್‌ಗಳು ಭಾಗವಹಿಸಿದ್ದರು.

## ಹಾಸನ

ಜೂನ್ 15ರಂದು ವಿಶ್ವ ರಕ್ತದಾನ ಪ್ರಯುಕ್ತ ಜಿಲ್ಲಾಡಳಿತ, ರೆಡ್‌ಕ್ರಾಸ್ ಸಂಸ್ಥೆ ಹಾಗೂ ಭಾರತ್ ಸ್ಕೌಟ್ಸ್-ಗೈಡ್ಸ್ ಹಾಸನ ಜಿಲ್ಲಾ ಸಂಸ್ಥೆಯ ಸಂಯುಕ್ತಾಶ್ರಯದಲ್ಲಿ ಜಿಲ್ಲಾಧಿಕಾರಿಗಳ ಕಛೇರಿಯಿಂದ ಹಾಸನಾಂಬ ಕಲಾಭವನದ ವರೆಗೆ ಜಾಥಾ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ಸದರಿ ಕಾರ್ಯಕ್ರಮದಲ್ಲಿ ಸ್ಕೌಟ್-ಗೈಡ್ ಸಂಸ್ಥೆವತಿಯಿಂದ 50ಕ್ಕೂ ಹೆಚ್ಚು ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು ಈ ಕಾರ್ಯಕ್ರಮಕ್ಕೆ ಜಿಲ್ಲಾಧಿಕಾರಿಗಳು ಹಾಗೂ ಸಿ.ಇ.ಓ. ಚಾಲನೆ ನೀಡಿದರು. ಈ ಸಂದರ್ಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಡಾ. ವೈ.ಎಸ್. ವೀರಭದ್ರಪ್ಪ, ಜಿಲ್ಲಾ ಕಾರ್ಯದರ್ಶಿ ಶ್ರೀ ಸುರೇಶ್ ಗುರೂಜಿ, ಜಿಲ್ಲಾ ಜಂಟಿ ಕಾರ್ಯದರ್ಶಿ ಶ್ರೀಮತಿ ಕಾಂಚನಮಾಲಾ, ಜಿಲ್ಲಾ ಸಂಘಟಕರು




ಕು॥ ಹೆಚ್.ಎಂ. ಪ್ರಿಯಾಂಕ ಹಾಗೂ ರೋವರ್ಸ್–ರೇಂಜರ್ಸ್ ಭಾಗವಹಿಸಿದ್ದರು.

* ಜೂನ್ 19ರಂದು ಹಾಸನ ಜಿಲ್ಲಾ ಸಂಸ್ಥೆಯಲ್ಲಿ ಜಿಲ್ಲಾ ಮಟ್ಟದ ಸ್ಕೌಟರ್ಸ್–ಗೈಡರ್ಸ್ ಸಮಾವೇಶವನ್ನು ಆಯೋಜಿಸಲಾಗಿತ್ತು. ಈ ಸಮಾವೇಶದಲ್ಲಿ ಎಂಟು ತಾಲ್ಲೂಕುಗಳಿಂದ 80ಕ್ಕೂ ಹೆಚ್ಚು ಕಬ್ ಮಾಸ್ಟರ್ಸ್, ಫ್ಲಾಕ್ ಲೀಡರ್ಸ್, ಸ್ಕೌಟ್ ಮಾಸ್ಟರ್ಸ್, ಗೈಡ್ ಕ್ಯಾಪ್ಟನ್‌ಗಳು ಭಾಗವಹಿಸಿದ್ದರು. ಈ ಕಾರ್ಯಕ್ರಮವನ್ನು ಜಿಲ್ಲಾ ದೈಹಿಕ ಅಧೀಕ್ಷಕರು ಹಾಗೂ ಎ.ಡಿ.ಸಿಯಾದ ಶ್ರೀ ವೆಂಕಟೇಶ್ ಮೂರ್ತಿಯವರು ಸಮಾವೇಶವನ್ನು ಉದ್ಘಾಟಿಸಿ ಮಾತನಾಡಿ ಸ್ಕೌಟ್ಸ್–ಗೈಡ್ಸ್ ಮಕ್ಕಳಲ್ಲಿ ಶಿಸ್ತು, ಸಂಯಮ, ಸೇವಾ ಮನೋಭಾವ ಜೊತೆಗೆ ಜೀವನ ಕೌಶಲ್ಯಗಳನ್ನು ಕಲಿಸುವಂತಹ ಶಿಕ್ಷಣವೇ ಸ್ಕೌಟ್ಸ್–ಗೈಡ್ಸ್ ಶಿಕ್ಷಣ ಎಂದರು.

ಅಧ್ಯಕ್ಷತೆಯನ್ನು ಡಾ॥ ವೈ. ಎಸ್. ವೀರಭದ್ರಪ್ಪ ಜಿಲ್ಲಾ ಮುಖ್ಯ ಆಯುಕ್ತರು ವಹಿಸಿದ್ದರು. ನಂತರ ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀಮತಿ ಕಾಮೇಶ್ವರಿ ಭಟ್ ಮತ್ತು ಶ್ರೀ ಎಂ.ಎಸ್. ಪ್ರಕಾಶ್ ರವರು ಶಿಕ್ಷಕ/ಶಿಕ್ಷಕಿಯರಿಗೆ ಮಾಹಿತಿ ನೀಡಿದರು.



ಸಮಾರೋಪ ಸಮಾರಂಭ ಕಾರ್ಯಕ್ರಮದಲ್ಲಿ ಉಪ ವಿಭಾಗಾಧಿಕಾರಿ ಡಾ॥ ಎ.ಎಸ್. ನಾಗರಾಜ್ ಮತ್ತು ಉಪನಿರ್ದೇಶಕ ಶ್ರೀ ಮಂಜುನಾಥ್ ರವರು ಉಪಸ್ಥಿತರಿದ್ದರು. ಇತ್ತೀಚೆಗೆ ಎಲ್.ಟಿ. ತರಬೇತಿಯನ್ನು ಪೂರ್ಣಗೊಳಿಸಿದ್ದ ಶ್ರೀಮತಿ ಕಾಮೇಶ್ವರಿ ಭಟ್ ರವರನ್ನು ಸನ್ಮಾನಿಸಲಾಯಿತು. ಇದೇ ಸಂದರ್ಭದಲ್ಲಿ ರಾಜ್ಯ ಸಂಸ್ಥೆಯಿಂದ ಬಂದಿರುವ 2019–20ನೇ ಸಾಲಿನ ವಾರ್ಷಿಕ ಯೋಜನಾ ಪುಸ್ತಕಗಳನ್ನು ಉಪವಿಭಾಗಾಧಿಕಾರಿಗಳು ಬಿಡುಗಡೆ ಮಾಡಿದರು. ನಂತರ ಎ.ಎಲ್.ಟಿ.(ಗೈ) ತರಬೇತಿಯನ್ನು ಪೂರ್ಣಗೊಳಿಸಿದ ಅರಸೀಕೆರೆ ತಾಲ್ಲೂಕಿನ ಮುರುಂಡಿ ಶಾಲೆಯ ಶ್ರೀಮತಿ ಕೆ.ಪಿ. ಕಾತ್ಯಾಯಿನಿ, ಹೊಳೆನರಸೀಪುರ ತಾಲ್ಲೂಕಿನ ಶ್ರೀಮತಿ ಕುಮುದ, ಹಾಸನ ತಾಲ್ಲೂಕಿನ ದುದ್ದ ಆರ್.ಎಸ್. ಶಾಲೆಯ ಶ್ರೀಮತಿ ಬಿ.ಎಸ್. ವನಜಾಕ್ಷಿ ರವರಿಗೆ ಪ್ರಮಾಣ ಪತ್ರ ನೀಡಿ ಅಭಿನಂದಿಸಲಾಯಿತು ಹಾಗೂ ಇದೇ ಸಂದರ್ಭದಲ್ಲಿ ಉಪನಿರ್ದೇಶಕರಾದ ಶ್ರೀ ಮಂಜುನಾಥ್ ಅವರಿಗೆ ಹಾಸನ ಜಿಲ್ಲೆಯು ಎಸ್.ಎಸ್.ಎಲ್.ಸಿ. ಫಲಿತಾಂಶದಲ್ಲಿ ರಾಜ್ಯಕ್ಕೆ ಪ್ರಥಮ ಸ್ಥಾನವನ್ನು ತಂದುಕೊಟ್ಟಿರುವುದಕ್ಕಾಗಿ ಗೌರವಿಸಲಾಯಿತು. ಹಿರಿಯ ಗೈಡರ್ ಎಂದು ಹಾಸನ ತಾಲ್ಲೂಕಿನ ಕಾರ್ಯದರ್ಶಿ ಶ್ರೀಮತಿ ವೈ.ಡಿ. ಪದ್ಮ ರವರನ್ನು ಸನ್ಮಾನ ಮಾಡಲಾಯಿತು.

ಉಪವಿಭಾಗಾಧಿಕಾರಿ ಡಾ॥ ಎ.ಎಸ್. ನಾಗರಾಜ್‌ರವರು ಮಾತನಾಡಿ ಹಾಸನ ಜಿಲ್ಲಾ ಸಂಸ್ಥೆಯಲ್ಲಿ ನಡೆಯುತ್ತಿರುವ ಸ್ಕೌಟ್–ಗೈಡ್ ಚಟುವಟಿಕೆಯ ಬಗ್ಗೆ, ಕಲ್ಯಾಣಿಗಳ ಪುನಶ್ಚೇತನ, ಸಸಿಗಳನ್ನು ನೆಡುತ್ತಿರುವ ಬಗ್ಗೆ ಇನ್ನೂ ಅನೇಕ ವಿಷಯಗಳನ್ನು ಹಂಚಿಕೊಂಡರು. ಉಪನಿರ್ದೇಶಕರಾದ ಶ್ರೀ ಮಂಜುನಾಥ್‌ರವರು ಮಾತನಾಡುತ್ತಾ ಎಲ್ಲಾ ಶಾಲೆಗಳಲ್ಲಿಯೂ ಕಡ್ಡಾಯವಾಗಿ ಘಟಕಗಳನ್ನು ತೆರೆಯಲೇಬೇಕು ಹಾಗೂ ಸ್ಕೌಟಿಂಗ್/ಗೈಡಿಂಗ್ ಕಾರ್ಯ ಚಟುವಟಿಕೆಗಳು ನಡೆಯಬೇಕು ಎಂದು ತಿಳಿಸಿದರು. ಈ ಸಮಾರಂಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಡಾ. ವೈ.ಎಸ್. ವೀರಭದ್ರಪ್ಪ ರವರು ಅಧ್ಯಕ್ಷತೆಯನ್ನು ವಹಿಸಿದ್ದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಸುರೇಶ್ ಗುರೂಜಿಯವರು ಎಲ್ಲಾರನ್ನು ಸ್ವಾಗತಿಸಿದರು.

* ಜೂನ್ 21ರಂದು ಭಾರತ್ ಸ್ಕೌಟ್ಸ್–ಗೈಡ್ಸ್ ಜಿಲ್ಲಾ ಸಂಸ್ಥೆಯಲ್ಲಿ ವಿಶ್ವ ಪರಿಸರ ದಿನಾಚರಣೆ ಹಾಗೂ ವಿಶ್ವ ಯೋಗ ದಿನಾಚರಣೆ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದು, ಈ ಕಾರ್ಯಕ್ರಮವನ್ನು ಜಿಲ್ಲಾ ಮುಖ್ಯ ಆಯುಕ್ತರಾದ

ಡಾ॥ ವೈ. ಎಸ್. ವೀರಭದ್ರಪ್ಪನವರು ಗಿಡಕ್ಕೆ ನೀರೆರೆಯುವುದರ ಮೂಲಕ ಉದ್ಘಾಟಿಸಿ ಮಾತನಾಡುತ್ತ ಗಿಡ ಮರಗಳು ಕೇವಲ ಹಸಿರಲ್ಲ, ಸಕಲ ಜೀವರಾಶಿಗಳಿಗೂ ಉಸಿರು ನೀಡುವ ಸಂಜೀವಿನಿಗಳು ಹಾಗೂ ಮಳೆಯನ್ನು ಧರೆಗೆ ತರಿಸಿ ವಾತಾವರಣವನ್ನು ಸಂತೋಲನವಾಗಿಡಲು ಸಸ್ಯಗಳು ಅಗತ್ಯ ಎಂದು ತಿಳಿಸಿದರು.

ಯೋಗ ದಿನಾಚರಣೆಯ ಪ್ರಯುಕ್ತ ಆಗಮಿಸಿದ ಜಿಲ್ಲಾ ದೈಹಿಕ ಶಿಕ್ಷಣಾಧಿಕಾರಿಗಳು ಹಾಗೂ ಎ.ಡಿ.ಸಿ.ಯಾದ ಶ್ರೀ ವೆಂಕಟೇಶ್ ಮೂರ್ತಿಯವರು ಮಕ್ಕಳಿಗೆ ಒಂದು ಗಂಟೆಗಳ ಕಾಲ ಪ್ರಾತ್ಯಕ್ಷಿಕವಾಗಿ ಯೋಗವನ್ನು ಮಾಡಿಸಿದರು. ವಿಶೇಷ ಆಹ್ವಾನಿತರಾಗಿ ತುಮಕೂರು ಜಿಲ್ಲೆಯಿಂದ ಡಾ. ಮೌಲ್ಯರವರು ಭಾಗವಹಿಸಿದ್ದರು. ಈ ಸಂದರ್ಭದಲ್ಲಿ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಪ್ರಕಾಶ್ ಎಸ್. ಯಾಜಿಯವರು ಮಾತನಾಡಿ ಸಸಿಗಳನ್ನು ನೆಡುವುದರ ಮೂಲಕ ಪ್ರಕೃತಿಯ ಉಳಿವಿಗೆ ನಾವೆಲ್ಲಾ ಪಣತೊಡಬೇಕಿದೆ ಎಂದರು. ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ಗಿರಿಜಾಂಬಿಕಾ ಮಾತನಾಡಿ ಮಾನವನಿಂದ ಪ್ರಕೃತಿಯ ಮೇಲೆ ಅಭಿವೃದ್ಧಿಯ ಹೆಸರಿನಲ್ಲಿ ನಿರಂತರ ದಾಳಿ ಆಗುತ್ತಿದೆ. ಇದರಿಂದ ಹೊರಬರಬೇಕಾದರೆ ಗಿಡಗಳನ್ನು ನೆಡಬೇಕು ಎಂದು ಕರೆಕೊಟ್ಟರು. ಜಿಲ್ಲಾ ಖಜಾಂಚಿ ಶ್ರೀಮತಿ ಜಯಾರಮೇಶ್ ಮಾತನಾಡಿ ಎಲ್ಲಾ ದಾನಗಳಲ್ಲಿ ಸೇವೆಯೂ ಕೂಡ ಒಂದು ಅತ್ಯುತ್ತಮವಾದ ದಾನ ಅದನ್ನು ಸ್ಕೌಟ್ಸ್-ಗೈಡ್ಸ್‌ಗಳು ಮಾಡುತ್ತಿದ್ದಾರೆ ಎಂದು ಸಂತಸ ವ್ಯಕ್ತಪಡಿಸಿದರು. ಜಿಲ್ಲಾ ಸಹ ಕಾರ್ಯದರ್ಶಿ ಸ್ವಾಗತಿಸಿದರು. ಜಿಲ್ಲಾ ಸಂಘಟಕಿ ಕು॥ ಪ್ರಿಯಾಂಕರವರು ನಿರೂಪಿಸಿದರು ಕಛೇರಿ ಸಹಾಯಕಿ ಶ್ರೀಮತಿ ಪೂರ್ಣಿಮ ರವರು ವಂದಿಸಿದರು. ನಂತರ ಪರಿಸರ ದಿನಾಚರಣೆಯ ಪ್ರಯುಕ್ತ ಸ್ಕೌಟ್ಸ್-ಗೈಡ್ಸ್‌ಗಳು ಗಿಡಗಳನ್ನು ಹಿಡಿದು ಸಾರ್ವಜನಿಕರಿಗೆ ನೀಡಿ ಗಿಡಮರಗಳ ಮಹತ್ವ ಹಾಗೂ ಪರಿಸರದ ಬಗ್ಗೆ ಜಾಗೃತಿ ಮೂಡಿಸಿದರು. ಈ ಸಂದರ್ಭದಲ್ಲಿ 60 ಕ್ಕೂ ಹೆಚ್ಚು ಸ್ಕೌಟ್ಸ್-ಗೈಡ್ಸ್, ರೋವರ್ಸ್ ಹಾಗೂ ರೇಂಜರ್ಸ್‌ಗಳು ಭಾಗವಹಿಸಿದ್ದರು. ಇದರೊಂದಿಗೆ ಜಿಲ್ಲಾ ಪದಾಧಿಕಾರಿಗಳು ಸ್ಕೌಟ್-ಗೈಡ್‌ಗಳೊಂದಿಗೆ ಸೇರಿ ಸಾರ್ವಜನಿಕರಿಗೆ ಗಿಡಗಳನ್ನು ನೀಡಿದರು.

* ಜೂನ್ 22ರಂದು ಜಿಲ್ಲಾ ಸಂಸ್ಥೆಯಲ್ಲಿ ಕಬ್ಸ್-ಬುಲ್‌ಬುಲ್ಸ್‌ಗಳಿಗೆ ಜಿಲ್ಲಾ ಮಟ್ಟದ ತೃತೀಯ ಚರಣ್ ಮತ್ತು ಸುವರ್ಣ ಪಂಖ್ ಪರೀಕ್ಷಾ ಶಿಬಿರವನ್ನು ಹಮ್ಮಿಕೊಂಡಿದ್ದು, ಈ ಶಿಬಿರಕ್ಕೆ 92 ಕಬ್ಸ್-ಬುಲ್‌ಬುಲ್ಸ್ ಹಾಗೂ ಹಾಗೂ 15 ಶಿಕ್ಷಕರು ಭಾಗವಹಿಸಿದ್ದರು. ಸದರಿ ಕಾರ್ಯಕ್ರಮದಲ್ಲಿ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಪ್ರಕಾಶ್ ಎಸ್. ಯಾಜಿರವರು ಅಧ್ಯಕ್ಷತೆಯನ್ನು ವಹಿಸಿ ದೀಪ ಬೆಳಗುವುದರ ಮೂಲಕ ಉದ್ಘಾಟಿಸಿ ಮಾತನಾಡಿ ಸಣ್ಣ ಮಕ್ಕಳು ದೇವರಿಗೆ ಸಮಾನ ಅದರಲ್ಲಿ ಕಬ್ಸ್ ಮತ್ತು ಬುಲ್‌ಬುಲ್ಸ್‌ಗಳಿಗೆ ಸ್ಕೌಟ್ಸ್-ಗೈಡ್ಸ್ ಚಳುವಳಿಯಲ್ಲಿ ವಿಶೇಷ ಕಾಳಜಿ ಇದೆ. ಈ ಪರೀಕ್ಷಾ ಶಿಬಿರದ ಸದುಪಯೋಗ ಪಡೆದುಕೊಳ್ಳಬೇಕು ಎಂದು ಶುಭ ಹಾರೈಸಿದರು.

ಜಿಲ್ಲಾ ಮುಖ್ಯ ಆಯುಕ್ತರಾದ ಡಾ. ವೈ.ಎಸ್. ವೀರಭದ್ರಪ್ಪ ಅವರು ಮಾತನಾಡಿ ಪೋಷಕರಿಗೆ ಒಳ್ಳೆಯ ಮಕ್ಕಳಾಗಬೇಕು, ಗುರುಗಳಿಗೆ ಒಳ್ಳೆಯ ವಿದ್ಯಾರ್ಥಿಗಳಾಗಬೇಕು, ದೇಶಕ್ಕೆ ಒಳ್ಳೆಯ ಪ್ರಜೆಯಾಗಬೇಕು ಹಾಗೆಯೇ ತಮ್ಮ ತಮ್ಮ ಕೆಲಸವನ್ನು ತಾವೇ ಮಾಡಿಕೊಳ್ಳಬೇಕೆಂದು ನುಡಿದು ಈ ಪರೀಕ್ಷಾ ಶಿಬಿರ ಯಶಸ್ವಿಯಾಗಲಿ ಎಂದು ಹಾರೈಸಿದರು. ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ಗಿರಿಜಾಂಬಿಕಾರವರು ಮಾತನಾಡಿ ಚಿಕ್ಕ ವಯಸ್ಸಿನಲ್ಲೇ ಒಳ್ಳೆಯ ಗುಣಗಳನ್ನು ಅಳವಡಿಸಿಕೊಳ್ಳಬೇಕು ಎಂದು ಅಭಿಪ್ರಾಯಪಟ್ಟರು. ಜಿಲ್ಲಾ ಕಾರ್ಯದರ್ಶಿ ಮಾತನಾಡಿ ಸಣ್ಣ ಮಕ್ಕಳು ಯಾವಾಗಲೂ ಸಂತೋಷದಿಂದ ನಗುಮುಖವನ್ನು ಹೊಂದಿರಬೇಕು ಮತ್ತು ಮಕ್ಕಳಿಗೆ ಹೇಗೆ ಕಥೆ ಕಟ್ಟಬೇಕು ಎಂದು ತಿಳಿಸಿ ಶುಭ ಹಾರೈಸಿದರು. ಈ ಸಂದರ್ಭದಲ್ಲಿ ಜಿಲ್ಲಾ ಖಜಾಂಚಿ ಮಕ್ಕಳಿಗೆ ಶುಭ ಹಾರೈಸಿದರು. ಜಿಲ್ಲಾ ಜಂಟಿ ಕಾರ್ಯದರ್ಶಿ ಶ್ರೀಮತಿ ಕಾಂಚನಮಾಲ ಹಾಗೂ ಶಿಕ್ಷಕರು ಉಪಸ್ಥಿತರಿದ್ದರು. ಜಿಲ್ಲಾ ಸಂಘಟಕಿ ಹೆಚ್.ಎಂ. ಪ್ರಿಯಾಂಕ ರವರು ನಿರೂಪಿಸಿದರು ಜಿಲ್ಲಾ ಕಛೇರಿ ಸಹಾಯಕಿ ಪೂರ್ಣಿಮಾರವರು ಸ್ವಾಗತಿಸಿದರು. ಶ್ರೀ ಡಿ.ವಿ. ದೇವರಾಜುರವರು ವಂದಿಸಿದರು.



## ಕಾರವಾರ

ಜೂನ್ 6ರಂದು ಕಾರವಾರ ಜಿಲ್ಲಾಡಳಿತದಿಂದ ನಡೆಸಿದ ವಿಶ್ವ ಪರಿಸರ ದಿನಾಚರಣೆಯಲ್ಲಿ ಜಿಲ್ಲಾ ಪದಾಧಿಕಾರಿಗಳು ಮತ್ತು ಸುಮಾರು 360 ಸ್ಕೌಟ್ಸ್-ಗೈಡ್ಸ್ ಇತರ ವಿದ್ಯಾರ್ಥಿಗಳು ಭಾಗವಹಿಸಿದ್ದರು.

* ಜೂನ್ 12ರಂದು ಹೊನ್ನಾವರದ ಹಳದೀಪುರದಲ್ಲಿ ಆರ್.ಇ.ಎಸ್. ಹೈಸ್ಕೂಲ ಹಾಗೂ ಪಿ.ಯು. ಕಾಲೇಜಿನಲ್ಲಿ ಜಿಲ್ಲಾ ಮಟ್ಟದ ಪ್ರತಿಭಾ ಪುರಸ್ಕಾರವನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಡಾ॥ ಜಿ.ಜಿ. ಸಭಾಹಿತರು ನೀಡಿ ಗೌರವಿಸಿದರು. ಈ ಕಾರ್ಯಕ್ರಮದಲ್ಲಿ ಜಿಲ್ಲಾ ಪದಾಧಿಕಾರಿಗಳು ಹಾಗೂ ಶಾಲಾ-ಕಾಲೇಜು ಆಡಳಿತ ಮಂಡಳಿ ಮತ್ತು ಇತರೆ ಅಧಿಕಾರಿಗಳು ಭಾಗವಹಿಸಿದ್ದರು.



*ಜೂನ್ 19ರಂದು ಭಟ್ಕಳ ಹೊನ್ನಾವರ ಈ 2 ತಾಲ್ಲೂಕುಗಳ ತಹಶೀಲ್ದಾರ. ಬಿ.ಇ.ಓ., ಅರಣ್ಯ ಅಧಿಕಾರಿಗಳು, ಆರೋಗ್ಯ ಅಧಿಕಾರಗಳ ಮುಖಾಂತರ ವಾರ್ಷಿಕ ಕಾರ್ಯಕ್ರಮ ಪುಸ್ತಕ ಬಿಡುಗಡೆ ಮಾಡಲಾಯಿತು.

* ಜೂನ್ 20ರಂದು ಕಾರವಾರದ ಜಿಲ್ಲಾಡಳಿತ ಆಯುಷ್ ಇಲಾಖೆ, ಜಿಲ್ಲಾ ಪಂಚಾಯತ ಹಾಗೂ ಭಾರತ್ ಸ್ಕೌಟ್ಸ್-ಗೈಡ್ಸ್ ಇತರೆ ಇಲಾಖೆಗಳ ವತಿಯಿಂದ ನಡೆದ ವಿಶ್ವಯೋಗ ದಿನಾಚರಣೆಯ ಜಾಥಾದಲ್ಲಿ 200 ಸ್ಕೌಟ್ಸ್-ಗೈಡ್ಸ್ ಭಾಗವಹಿಸಿದ್ದರು. ಈ ಕಾರ್ಯಕ್ರಮದಲ್ಲಿ ಜಿಲ್ಲಾ ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು ಭಾಗವಹಿಸಿದ್ದರು.

* ಜೂನ್ 21ರಂದು ನಡೆದ ವಿಶ್ವ ಯೋಗ ದಿನಾಚರಣೆಯ ಅಂಗವಾಗಿ ಕಾರವಾರದ ಜಿಲ್ಲಾಡಳಿತ, ಆಯುಷ್ ಇಲಾಖೆ,



ಜಿಲ್ಲಾ ಪಂಚಾಯತ ಹಾಗೂ ಭಾರತ್ ಸ್ಕೌಟ್ಸ್-ಗೈಡ್ಸ್ ಇತರೆ ಇಲಾಖೆಗಳ ವತಿಯಿಂದ ನಡೆಸಿದ ಯೋಗ ಶಿಬಿರದಲ್ಲಿ ಸುಮಾರು 600 ಶಿಬಿರಾರ್ಥಿಗಳು ಭಾಗವಹಿಸಿದ್ದರು. ಈ ಶಿಬಿರದ ಉದ್ಘಾಟನೆಯನ್ನು ಜಿಲ್ಲಾಧಿಕಾರಿಗಳಾದ ಡಾ॥ ಕೆ. ಹರೀಶಕುಮಾರ ಭಾ.ಆ.ಸೇ., ಶ್ರೀ ಎಂ. ರೋಶನ್, ಐ.ಎ.ಎಸ್. ಜಿಲ್ಲಾ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು ಶ್ರೀ ವಿನಾಯಕ ಪಾಟೀಲ್ ಐ.ಪಿ.ಎಸ್. ಡಿ.ಎಚ್.ಓ., ಜಿಲ್ಲಾ ಆಯುಷ್ ಇಲಾಖೆಯ ಅಧಿಕಾರಿ ಹಾಗೂ ಡಿ.ಡಿ.ಪಿ.ಐ. ರವರಾದ ಶ್ರೀ ಮಂಜುನಾಥ ಹಾಗೂ ಇತರೆ ಎಲ್ಲಾ ಅಧಿಕಾರಿ ವರ್ಗದವರು ಜಿಲ್ಲಾ ಸಂಸ್ಥೆಯ ಡಾ॥ ಜಿ.ಜಿ. ಸಭಾಹಿತ ಜಿಲ್ಲಾ ಮುಖ್ಯ ಆಯುಕ್ತರು, ಶ್ರೀಮತಿ ಶೋಭಾ ಕುಲಕರ್ಣಿ ಡಿ.ಸಿ.(ಜಿ.) ರಾಜ್ಯ ಸಂಸ್ಥೆಯಿಂದ ಶ್ರೀಮತಿ ಜಾನಕಿ ವೇಣುಗೋಪಾಲ ಶ್ರೀಮತಿ ರಾಧ ವೆಂಕಟೇಶ್, ಶ್ರೀ ದುರ್ಗೇಕರ, ಶ್ರೀ ಮನ್ಸೂರ ಮುಲ್ಲಾ ಭಾಗವಹಿಸಿದ್ದರು. ಈ ಕಾರ್ಯಕ್ರಮದಲ್ಲಿ ಸ್ಕೌಟ್-ಗೈಡ್ ವಾರ್ಷಿಕ ಯೋಜನಾ ಕಾರ್ಯಕ್ರಮದ ಪುಸ್ತಕವನ್ನು ಬಿಡುಗಡೆ ಮಾಡಲಾಯಿತು.

* ಪೋಲೀಸ್ ಪರೇಡ್ ಗ್ರೌಂಡ್, ಪೋಲೀಸ್ ಹೆಡ್ ಕ್ವಾಟ್ರಸ್, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಜಿಲ್ಲಾ ಮಟ್ಟದ ಸಸಿ ಕಾರ್ಯಕ್ರಮವನ್ನು ಆಯೋಜಿಸಲಾಯಿತು. ಈ ಶಿಬಿರದ ಉದ್ಘಾಟನಾ ಕಾರ್ಯಕ್ರಮವನ್ನು ಶ್ರೀ ಸಚಿನ್



ಲಾರೆನ್ಸ್ ಸಿ.ಪಿ.ಐ. ಇವರು ನೆರವೇರಿಸಿದರು. ಜಿಲ್ಲಾ ಸಂಸ್ಥೆಯ ವತಿಯಿಂದ ಶಾಲಾ ಆವರಣದಲ್ಲಿ ಕೈತೋಟವನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಡಾ॥ ಜಿ.ಜಿ. ಸಭಾಹಿತರವರು ಉದ್ಘಾಟಿಸಿದರು.

* ಜೂನ್ 22ರಂದು ಜಿಲ್ಲಾ ಪ್ರಗತಿ ಪರಿಶೀಲನಾ ಸಭೆಯನ್ನು ಹೊನ್ನಾವರ ಐಬಿನಲ್ಲಿ ನಡೆಸಲಾಯಿತು. ಈ ಸಭೆಯಲ್ಲಿ ಡಾ॥ ಜಿ.ಜಿ. ಸಭಾಹಿತ (ಡಿ.ಸಿ.ಪಿ.) ಶ್ರೀಮತಿ ಶೋಭಾ ಕುಲಕರ್ಣಿ (ಸಿ.ಜಿ.) ರಾಜ್ಯ ಸಂಸ್ಥೆಯಿಂದ ಶ್ರೀಮತಿ ಜಾನಕಿ ವೇಣುಗೋಪಾಲ್ ರವರು ಭಾಗವಹಿಸಿದ್ದರು. ಸ್ಥಳೀಯ ಸಂಸ್ಥೆಯ ವಿವರಗಳಿಗೆ ಸ್ಥಳೀಯ ಸಂಸ್ಥೆಯವರು ಮಾಹಿತಿ ನೀಡುವ ಬಗ್ಗೆ ಒಪ್ಪಿಗೆ ಸೂಚಿಸಿದರು. ವಾರ್ಷಿಕ ಕಾರ್ಯಕ್ರಮ ಪುಸ್ತಕವನ್ನು ಬಿಡುಗಡೆ ಮಾಡಲಾಯಿತು. ಕಾರ್ಯದರ್ಶಿ ಸ್ವಾಗತಿಸಿದರು. ಎ.ಎಸ್.ಒ.ಸಿ. ವಂದಿಸಿದರು.

* ಜೂನ್ 24ರಂದು ಕುಮಟಾ ಮತ್ತು ಅಂಕೋಲಾದ ತಹಶಿಲ್ದಾರ ಬಿ.ಇ.ಒ. ಆರೋಗ್ಯ ಅಧಿಕಾರಿ ಅರಣ್ಯ ಇಲಾಖೆ ಅಧಿಕಾರಿ ಸ್ಥಳೀಯ ಸಂಸ್ಥೆ ಜಿಲ್ಲಾ ಪದಾಧಿಕಾರಿಗಳೊಂದಿಗೆ ವಾರ್ಷಿಕ ಕಾರ್ಯಕ್ರಮ ಪುಸ್ತಕವನ್ನು ಬಿಡುಗಡೆ ಮಾಡಲಾಯಿತು.

* ಜುಲೈ 20ರಂದು ಕೃಷಿ ಕಾರ್ಯಚಟುವಟಿಕೆಯ ಹಾಗೂ ಗದ್ದೆಯಲ್ಲಿ ಸಸಿ ನಾಟಿ ಮಾಡುವ ಕುರಿತು ಸ್ಕೌಟ್ಸ್-ಗೈಡ್ಸ್ ರೋವರ್ಸ್-ರೇಂಜರ್ಸ್‌ಗಳಿಗೆ ಉಪನ್ಯಾಸ ನೀಡಿ ನಾಟಿ ಮಾಡಿಸಲಾಯಿತು. ಈ ಕಾರ್ಯಕ್ರಮದಲ್ಲಿ ಜಿಲ್ಲಾ ಕಾರ್ಯದರ್ಶಿ, ಎ.ಎಸ್.ಒ.ಸಿ. ಪಂಚಾಯತ ಅಧ್ಯಕ್ಷರು, ಸದಸ್ಯರು, ಹೊಸಪಟ್ಟಣದ ಗ್ರಾಮದ ಕೃಷಿಕರು, ಸುಮಾರು 35 ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ಭಾಗವಹಿಸಿದ್ದರು.

* ಜುಲೈ 19ರಂದು ಹೊನ್ನಾವರ ನಗರದ ಮಾರ್ಥೋಮಾ ಶಾಲೆಯಲ್ಲಿ 2019-20ನೇ ಸಾಲಿನ ಸ್ಕೌಟ್ಸ್-ಗೈಡ್ಸ್ ಯೋಜನಾ ಕಾರ್ಯಕ್ರಮಗಳ ಪುಸ್ತಕ ಬಿಡುಗಡೆ ಕಾರ್ಯಕ್ರಮವನ್ನು ವ್ಯವಸ್ಥಾಪಕ ಪ್ರಾಂಶುಪಾಲರಾದ ಶ್ರೀ ಜಾನ್ ಪಿ. ಜಾನ್ ರವರು ನಡೆಸಿದರು. ಶಾಲೆಯ ಆಡಳಿತ ಮಂಡಳಿ ಮುಖ್ಯೋಪಾಧ್ಯಾಯರುಗಳು ಶ್ರೀ ಬಿ.ಡಿ. ಫರ್ನಾಂಡೀಸ್, ಜಿಲ್ಲಾ ಕಾರ್ಯದರ್ಶಿ, ಶ್ರೀ ಕರಿಸಿದ್ದಪ್ಪ ಎ.ಎಸ್.ಒ.ಸಿ. ಸ್ಕೌಟ್ಸ್-ಗೈಡ್ಸ್ ಶಿಕ್ಷಕರುಗಳು ಭಾಗವಹಿಸಿದ್ದರು.

* ಜುಲೈ 18ರಂದು ಹೊನ್ನಾವರದ ಹೋಲಿರೋಸರಿ ಪ್ರೌಢಶಾಲೆಯಲ್ಲಿ ತಾಲೂಕು ಮಟ್ಟದ ಮುಖ್ಯ ಶಿಕ್ಷಕರ ಸ್ಕೌಟ್ಸ್-ಗೈಡ್ಸ್ ಮಾಹಿತಿ ಶಿಬಿರವನ್ನು ನಡೆಸಲಾಯಿತು. ಈ ಶಿಬಿರದಲ್ಲಿ ಶ್ರೀ ಅಶೋಕ ಬಜಂತ್ರಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಬಿ.ಆರ್.ಸಿ. ಮತ್ತು ಬಿ.ಆರ್.ಪಿ. ಶಿಕ್ಷಣ ಸಂಯೋಜಕರು ಎ.ಎಸ್.ಒ.ಸಿ. ಸುಮಾರು 206 ಶಿಕ್ಷಕರುಗಳು ಭಾಗವಹಿಸಿದ್ದರು.

* ಜುಲೈ 3ರಂದು ಭಟ್ಕಳ ತಾಲೂಕಿನ ತಹಶೀಲ್ದಾರ್ ಹಾಗೂ ಸ್ಥಳೀಯ ಸಂಸ್ಥೆ ಅಧ್ಯಕ್ಷರಾದ ಶ್ರೀ ಬಾಡ್ಕರ್ ರವರನ್ನು ಶ್ರೀ ವೆಂಕಟೇಶ್ ಗುಬ್ಬಿ ಹಿತ್ತಲ್, ಕಾರ್ಯದರ್ಶಿ ಶ್ರೀ ಮಂಜುನಾಥ, ಖಜಾಂಚಿ ಹಾಗೂ ಇತರೆ ಪದಾಧಿಕಾರಿಗಳು ಭೇಟಿ ನೀಡಿ ವಾರ್ಷಿಕ ಯೋಜನೆ ಕಾರ್ಯಕ್ರಮ ಪುಸ್ತಕವನ್ನು ಬಿಡುಗಡೆ ಮಾಡಿದರು.

* ಜುಲೈ 1ರಂದು ಭಟ್ಕಳ ತಾಲೂಕಿನ ಶಿಕ್ಷಕರುಗಳಿಗೆ ಸ್ಕೌಟ್ಸ್-ಗೈಡ್ಸ್ ಮಾಹಿತಿ ಶಿಬಿರವನ್ನು ನಡೆಸಲಾಯಿತು. ಈ ಶಿಬಿರದಲ್ಲಿ ಸುಮಾರು 64 ಶಿಕ್ಷಕರು ಭಾಗವಹಿಸಿದ್ದರು. ಈ ಸಂದರ್ಭದಲ್ಲಿ ನಿವೃತ್ತಿ ಹೊಂದಿದ ಶ್ರೀ ಹರಿಕಾಂತ ಅವರಿಗೆ ಸ್ಕೌಟ್ಸ್-ಗೈಡ್ಸ್ ವತಿಯಿಂದ ಬೀಳ್ಕೊಡಲಾಯಿತು. ಸ್ಥಳೀಯ ಸಂಸ್ಥೆಯ ಶ್ರೀ ವೆಂಕಟೇಶ್ ಗುಬ್ಬಿ ಹಿತ್ತಲ್ ಕಾರ್ಯದರ್ಶಿ, ಶ್ರೀ ಮಂಜುನಾಥ, ಖಜಾಂಚಿ ಹಾಗೂ ಇತರೆ ಪದಾಧಿಕಾರಿಗಳು. ಭಾಗವಹಿಸಿದ್ದರು.

## ಕೊಪ್ಪಳ

ಜುಲೈ 5ರಂದು ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕಿನ ಕರ್ನಾಟಕ ಪಬ್ಲಿಕ್ ಶಾಲೆ, ಹನುಮಸಾಗರದಲ್ಲಿ ಡಾ. ಎ.ಪಿ.ಜೆ. ಅಬ್ದುಲ್ ಕಲಾಂ ಸ್ಕೌಟ್ಸ್ ಘಟಕದಲ್ಲಿ ದ್ವಿತೀಯ ಸೋಪಾನ ಪ್ರಮಾಣ ಪತ್ರಗಳನ್ನು ಶ್ರೀ ಅಮರೇಗೌಡ ಬಯ್ಯಾಪೂರ, ಮಾನ್ಯ ಶಾಸಕರು, ಕುಷ್ಟಗಿ ಇವರು ವಿತರಿಸಿ ಮಕ್ಕಳನ್ನು ಪ್ರೋತ್ಸಾಹಿಸಿದರು. ಈ ಸಂದರ್ಭದಲ್ಲಿ ಗ್ರಾ.ಪಂ. ಅಧ್ಯಕ್ಷಿಣಿ ಶ್ರೀಮತಿ ಚಂದ್ರಕಲಾ ವಾಲ್ಮೀಕಿ. ಜಿ.ಪಂ. ಸದಸ್ಯರಾದ ಶ್ರೀ ಭೀಮಣ್ಣ ಅಗಸಿ ಮುಂದಿನ, ಜಿ.ಪಂ. ಶ್ರೀ ನೇಮಣ್ಣ ಮೇಲಸಕ್ರಿ, ಹನಮಸಾಗರ ತಾ.ಪಂ. ಸದಸ್ಯರಾದ ಶ್ರೀಮತಿ ಶಕೀಲಾ ಡಲಾಯತ್, ಎಸ್.ಡಿ.ಎಂ.ಸಿ. ಅಧ್ಯಕ್ಷರಾದ ಶ್ರೀ ಸುಭಾಸಚಂದ್ರ ವಡ್ಡರ, ಕುಷ್ಟಗಿಯ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಎಂ. ಚನ್ನಬಸಪ್ಪ., ಕರ್ನಾಟಕ ಪಬ್ಲಿಕ್ ಶಾಲೆಯ ಪ್ರಾಚಾರ್ಯರಾದ ಶ್ರೀ ಪಿ. ಎಚ್. ತಳವಾರ. ಉಪ ಪ್ರಾಚಾರ್ಯರಾದ ಶ್ರೀ ಎಮ್.ಎಸ್. ಬಡದಾನಿ. ಮು.ಗು. ಶ್ರೀ ಕೊಳ್ಳಿ ಶ್ರೀ ಎಂ.ಬಿ. ಅರಳಿ, ಶ್ರೀ ನಂದಲಾಲ ಧಲಭಂಜನ, ಸ್ಕೌಟ್ ಮಾಸ್ಟರ್ ಶ್ರೀ ಮಹಿಬೂಬ ಕಂದಗಲ್ಲ ಹಾಗೂ ಕೆಪಿ.ಎಸ್. ಶಾಲೆಯ ಸಿಬ್ಬಂದಿ ವರ್ಗ ಹಾಗೂ ಸ್ಕೌಟ್-ಗೈಡ್‌ಗಳು ಹಾಜರಿದ್ದರು.





* ಜುಲೈ 10ರಂದು ಸರಕಾರಿ, ಅನುದಾನಿತ, ಅನುದಾನರಹಿತ ಪ್ರಾಥಮಿಕ, ಪ್ರೌಢಶಾಲೆ ಮತ್ತು ವಸತಿ ಶಾಲೆಗಳ ಕಬ್ ಮಾಸ್ಟರ್ಸ್, ಫ್ಲಾಕ್ ಲೀಡರ್ಸ್, ಸ್ಕೌಟ್ ಮಾಸ್ಟರ್ಸ್, ಗೈಡ್ ಕ್ಯಾಪ್ಟನ್ಸ್‌ಗಳ ವಾರ್ಷಿಕ ಸಮಾವೇಶವು ಶಾಸಕರ ಮಾದರಿ ಹಿರಿಯ ಪ್ರಾಥಮಿಕ ಶಾಲೆ ಯಲಬುರ್ಗಾದಲ್ಲಿ ಜರುಗಿತು. ಶ್ರೀ ಶ್ರೀಕಾಂತ ಮಾಸಗಟ್ಟಿ, ಜಿಲ್ಲಾ ತರಬೇತಿ ಆಯುಕ್ತರು ಕೊಪ್ಪಳ, ತಮ್ಮ ಪ್ರಾಸ್ತಾವಿಕ ಭಾಷಣದಲ್ಲಿ ಪ್ರತಿವರ್ಷ ಸಮಾವೇಶವನ್ನು ಹಮ್ಮಿಕೊಳ್ಳುವ ಉದ್ದೇಶದ ಬಗ್ಗೆ ವಿವರವಾಗಿ ತಿಳಿಸಿಕೊಟ್ಟರು. ಶ್ರೀ ಶಿವರಾಜ ಗುರಿಕಾರ, ಎ.ಡಿ.ಸಿ. ಹಾಗೂ ಪ್ರಾಚಾರ್ಯರು ಪದವಿ ಕಾಲೇಜ, ಯಲಬುರ್ಗಾ ಇವರು ಸಮಾವೇಶವನ್ನು ಉದ್ಘಾಟಿಸಿದರು. ಸಮಾವೇಶದ ಅಧ್ಯಕ್ಷತೆಯನ್ನು ಶ್ರೀ ಶರಣಪ್ಪ ವಟಗಲ, ಅಧ್ಯಕ್ಷರು ಹಾಗು ಕ್ಷೇತ್ರ ಶಿಕ್ಷಣಾಧಿಕಾರಿಗಳು ಸ್ಥಳೀಯ ಸಂಸ್ಥೆ ಯಲಬುರ್ಗಾ ಇವರು ವಹಿಸಿ ಅಧ್ಯಕ್ಷೀಯ ಭಾಷಣದಲ್ಲಿ ತಾಲೂಕಿನಲ್ಲಿ ನಮ್ಮ ಸ್ಥಳೀಯ ಸಂಸ್ಥೆಯು ಉತ್ತಮವಾಗಿ ಕಾರ್ಯನಿರ್ವಹಿಸುತ್ತಿದೆ, ಪ್ರತಿ ಶಾಲೆಯಲ್ಲಿ ಸ್ಕೌಟ್-ಗೈಡ್ ಘಟಕಗಳನ್ನು ತೆರೆಯಲು ಇಲಾಖೆಯಿಂದ ಎಲ್ಲಾ ಸಹಕಾರ ನೀಡುವುದಾಗಿ ತಿಳಿಸಿದರು. ಶ್ರೀ ವೀರಪ್ಪ ಗಾಣಗೇರ ನಿರೂಪಿಸಿದರು. 60 ಜನ ಸ್ಕೌಟರ್ಸ್-ಗೈಡರ್ಸ್‌ಗಳು ಸಮಾವೇಶದಲ್ಲಿ ಭಾಗವಹಿಸಿದ್ದರು.

## ಕೋಲಾರ

ಜುಲೈ 10ರಂದು ಕೋಲಾರ ಜಿಲ್ಲಾ ಸಂಸ್ಥೆ ಮತ್ತು ಬಂಗಾರಪೇಟೆ ಸ್ಥಳೀಯ ಸಂಸ್ಥೆ ಇವರ ಸಂಯುಕ್ತಾಶ್ರಯದಲ್ಲಿ ಸ್ಕೌಟ್-ಗೈಡ್ ಪ್ರಾರಂಭಿಕ ಶಿಬಿರವನ್ನು ಸರ್ಕಾರಿ ಬಾಲಕರ ಪದವಿ ಪೂರ್ವ ಕಾಲೇಜು ಬಂಗಾರಪೇಟೆ ಇಲ್ಲಿ ನಡೆಸಲಾಯಿತು. ಈ ಕಾರ್ಯಕ್ರಮವನ್ನು ಬಿ.ಇ.ಒ. ಶ್ರೀ ಕೆಂಪಯ್ಯರವರು ಉದ್ಘಾಟಿಸಿದರು. ಇವರು ಮಾತನಾಡಿ ಬಂಗಾರಪೇಟೆ ವಲಯದ ಎಲ್ಲಾ ಶಾಲೆಗಳಲ್ಲಿ ಸ್ಕೌಟ್ಸ್-ಗೈಡ್ಸ್ ಗಳಗಳನ್ನು ಕಡ್ಡಾಯವಾಗಿ ಪ್ರಾರಂಭಿಸಿ ಮಕ್ಕಳಲ್ಲಿ ಒಳ್ಳೆಯ ಶಿಸ್ತನ್ನು ಮೂಡಿಸಿ, ಉತ್ತಮ ಪ್ರಜೆಗಳನ್ನಾಗಿ ಮಾಡುವಂತೆ ಶಿಕ್ಷಕರಿಗೆ ಕರೆ ನೀಡಿದರು. ಈ ಶಿಬಿರದಲ್ಲಿ 40 ಶಿಕ್ಷಕ-ಶಿಕ್ಷಕಿಯರು ಭಾಗವಸಿದ್ದರು. ಶಿಬಿರದ ನಾಯಕರಾಗಿ ಶ್ರೀ ನಂಜುಂಡಪ್ಪ ಹಾಗೂ ಸಿಬ್ಬಂದಿಯಾಗಿ ಶ್ರೀ ಸಂಪತ್‌ಕುಮಾರ್, ಶ್ರೀ ವಿಶ್ವನಾಥ್, ಶ್ರೀ ಶಂಕರಪ್ಪ, ಶ್ರೀ ಸತೀಶ್ ಕಾರ್ಯನಿರ್ವಹಿಸಿದರು.

## ಮೈಸೂರು

ಜೂನ್ 3ರಂದು ನಂಜನಗೂಡು ಸ್ಥಳೀಯ ಸಂಸ್ಥೆ ವತಿಯಿಂದ ಅರಣ್ಯ ಇಲಾಖೆಯ ಸಹಯೋಗದೊಂದಿಗೆ ವನಮಹೊತ್ಸವ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ಈ ಸಂದರ್ಭದಲ್ಲಿ ಸ್ಕೌಟ್-ಗೈಡ್‌ಗಳಿಂದ ಬೀಜದ ಉಂಡೆ ಮಾಡುವ ಕಾರ್ಯವನ್ನು ಹಮ್ಮಿಕೊಳ್ಳಲಾಗಿತ್ತು.

ಈ ಕಾರ್ಯಕ್ರಮದಲ್ಲಿ ನಂಜನಗೂಡಿನ ಎ.ಸಿ.ಎಫ್. ಶ್ರೀ ಪರಮೇಶ್ವರ್, ಆರ್.ಎಫ್.ಓ ಶ್ರೀ ಲೇಕೋಶ್ ರವರು ಹಾಜರಿದ್ದು, ಸ್ಕೌಟ್-ಗೈಡ್‌ಗಳಿಗೆ ಬೀಜದ ಉಂಡೆ ಮಾಡುವ ವಿಧಾನ, ಅದರಿಂದ ಆಗುವ ಉಪಯೋಗ ಹಾಗೂ ಪರಿಸರ



ಸಂರಕ್ಷಣೆ ಬಗ್ಗೆ ಮಾಹಿತಿಯನ್ನು ನೀಡಿದರು.

ಸಂಸ್ಥೆಯ ಅಧ್ಯಕ್ಷರಾದ ಶ್ರೀ ಆರ್.ವಿ. ಮಹದೇವಸ್ವಾಮಿ, ಜಿಲ್ಲಾ ಸ್ಕೌಟ್ ತರಬೇತಿ ಆಯುಕ್ತರಾದ ಶ್ರೀ ಎಂ. ಗೋಪಾಲಕೃಷ್ಣ, ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಮಹದೇವಯ್ಯ, ಸ್ಕೌಟರ್ಸ್-ಗೈಡರ್ಸ್, ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

*ಜೂನ್ 28 ರಿಂದ 30ರ ವರೆಗೆ ಶ್ರೀ ಜಯಚಾಮರಾಜೇಂದ್ರ ಸ್ಕೌಟ್-ಗೈಡ್ಸ್ ಕೇಂದ್ರ ಕಛೇರಿ, ಮೈಸೂರಿನಲ್ಲಿ ಸ್ಕೌಟ್ಸ್-ಗೈಡ್ಸ್‌ಗಳಿಗೆ ತೃತೀಯ ಸೋಪಾನ ಶಿಬಿರ ಆಯೋಜಿಸಲಾಗಿತ್ತು. ಈ ಶಿಬಿರದಲ್ಲಿ 162 ಸ್ಕೌಟ್ಸ್, 74 ಗೈಡ್ಸ್‌ಗಳು ಭಾಗವಹಿಸಿದ್ದರು. ಶ್ರೀ ಚಂದ್ರು ಮತ್ತು ಕುಮಾರಿ ಆಶಾಲತ ಕ್ರಮವಾಗಿ ಸ್ಕೌಟ್, ಗೈಡ್ ವಿಭಾಗಕ್ಕೆ ನಾಯಕರುಗಳಾಗಿ ಕಾರ್ಯ ನಿರ್ವಹಿಸಿದರು.

ಜೂನ್ 28ರಂದು ಶ್ರೀ ಅಬ್ದುಲ್ ಜಮೀಲ್, ಜಿಲ್ಲಾ ಕಾರ್ಯದರ್ಶಿಗಳು ಶಿಬಿರವನ್ನು ಉದ್ಘಾಟಿಸಿದರು. ಜೂನ್ 29ರಂದು ಸಂಜೆ ನಡೆದ ಭವ್ಯ ಶಿಬಿರಾಗ್ನಿ ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳಾಗಿ ಶ್ರೀ ರಾಮುಪ್ರಸಾದ್ ರವರು ಆಗಮಿಸಿದ್ದರು. ಜೂನ್ 30ರಂದು ಶ್ರೀ ಎಂ.ವಿ. ಅಮರ್‌ನಾಥ್ ರವರ ನೇತೃತ್ವದಲ್ಲಿ ಸರ್ವಧರ್ಮ ಪ್ರಾರ್ಥನೆ ಕಾರ್ಯಕ್ರಮ ನೆರವೇರಿತು. ಮಧ್ಯಾಹ್ನ 2 ಗಂಟೆಗೆ ಮುಕ್ತಾಯ ಸಮಾರಂಭ ನಡೆಯಿತು. ಶ್ರೀ ಎಂ.ಎನ್. ಸುರೇಶ್ ಕುಮಾರ್ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಶ್ರೀ ಪಿ. ವಿಶ್ವನಾಥ್, ಜಿಲ್ಲಾ ಪ್ರದಾನ ಆಯುಕ್ತರು ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದರು.

ಶಿಬಿರಕ್ಕೆ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಟಿ.ಎಸ್. ರವಿಶಂಕರ್, ಗೈಡ್ ಆಯುಕ್ತರಾದ ಶ್ರೀಮತಿ ಪುಷ್ಪವಲ್ಲಿ, ಜಿಲ್ಲಾ ಖಜಾಂಚಿಗಳಾದ ಡಾ. ಕೆ.ಬಿ. ಗುರುಮೂರ್ತಿ ರವರು ಭೇಟಿ ನೀಡಿ ಮಕ್ಕಳಿಗೆ ಶುಭ ಹಾರೈಸಿದರು.

ಶಿಬಿರದಲ್ಲಿ ಸಂಪನ್ಮೂಲ ವ್ಯಕ್ತಿಗಳಾಗಿ ಶ್ರೀಮತಿ ಸುಜಯಾ, ಶ್ರೀ ಎಂ.ವಿ. ಅಮರ್‌ನಾಥ್, ಶ್ರೀ ಅಜಯ ಕುಮಾರ್ ಜೈನ್, ಶ್ರೀ ಎಂ.ಆರ್. ಶ್ರೀರಾಂ, ಶ್ರೀ ಶಶಿಧರ್, ಶ್ರೀ ಆರ್.ಪಿ. ಚಂದ್ರು, ಶ್ರೀ ರಾಮುಪ್ರಸಾದ್ ರವರುಗಳು ಕಾರ್ಯ ನಿರ್ವಹಿಸಿದರು.



* ಜುಲೈ 4 ರಿಂದ 6ರ ವರೆಗೆ ಶ್ರೀ ಜಯಚಾಮರಾಜೇಂದ್ರ ಸ್ಕೌಟ್ಸ್-ಗೈಡ್ಸ್ ಕೇಂದ್ರ ಕಛೇರಿ, ಮೈಸೂರಿನಲ್ಲಿ ರೋವರ್ಸ್-ರೇಂಜರ್ಸ್‌ಗಳಿಗೆ ನಿಪುಣ್ ಶಿಬಿರ ಆಯೋಜಿಸಲಾಗಿತ್ತು. ಈ ಶಿಬಿರದಲ್ಲಿ 50ರೋವರ್ಸ್, 82ರೇಂಜರ್ಸ್‌ಗಳು ಭಾಗವಿಸಿದ್ದರು. ಶ್ರೀ ಬಾಲಕೃಷ್ಣರವರು ರೋವರ್ಸ್ ವಿಭಾಗಕ್ಕೆ ಮತ್ತು ಶ್ರೀಮತಿ ಮಾಲತಿ ನಾಯಕ್ ರವರು ರೇಂಜರ್ಸ್ ವಿಭಾಗಕ್ಕೆ ನಾಯಕರುಗಳಾಗಿ ಕಾರ್ಯ ನಿರ್ವಹಿಸಿದರು.

ಜುಲೈ 4ರಂದು ಸಂಜೆ ಜರುಗಿದ ಕಾರ್ಯಕ್ರಮದಲ್ಲಿ ಶ್ರೀ ಬಿ.ಕೆ. ಬಸವರಾಜು, ಜಂಟಿ ರಾಜ್ಯ ಕಾರ್ಯದರ್ಶಿಗಳು, ಶ್ರೀಮತಿ ಅರುಣಮಾಲ, ಸಹಾಯಕ ರಾಜ್ಯ ತರಬೇತಿ ಆಯುಕ್ತರು, ಡಾ. ಕೆ.ಬಿ. ಗುರುಮೂರ್ತಿ, ಜಿಲ್ಲಾ ಖಜಾಂಚಿಗಳು, ಶ್ರೀ ಅಬ್ದುಲ್ ಜಮೀಲ್, ಜಿಲ್ಲಾ ಕಾರ್ಯದರ್ಶಿಗಳು, ಶ್ರೀಮತಿ ಕಮಲಾ, ಎ.ಎಲ್.ಟಿ. (ಗೈಡ್) ಭಾಗವಹಿಸಿದ್ದರು.

ಜುಲೈ 5ರಂದು ಸಂಜೆ ನಡೆದ ಭವ್ಯ ಶಿಭಿರಾಗ್ನಿ ಕಾರ್ಯಕ್ರಮ ನೆರವೇರಿತು. ಜೂನ್ 30 ರಂದು ಸರ್ವಧರ್ಮ ಪ್ರಾರ್ಥನೆ ಕಾರ್ಯಕ್ರಮ ನೆರವೇರಿತು. ಶ್ರೀ ಪಿ. ವಿಶ್ವನಾಥ್, ಜಿಲ್ಲಾ ಪ್ರಧಾನ ಆಯುಕ್ತರು ಈ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.ಸಂಜೆ 4 ಗಂಟೆಗೆ ಮುಕ್ತಾಯ ಸಮಾರಂಭ ನಡೆಯಿತು. ಶ್ರೀ ಹೆಚ್.ಎನ್. ಉಮೇಶ್, ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಶ್ರೀಮತಿ ಸುಜಯಾ, ಜಿಲ್ಲಾ ಜಂಟಿ ಕಾರ್ಯದರ್ಶಿಗಳು ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದರು.

ಶಿಬಿರಕ್ಕೆ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಟಿ.ಎಸ್. ರವಿಶಂಕರ್, ಗೈಡ್ ಆಯುಕ್ತರಾದ ಶ್ರೀಮತಿ ಪುಷ್ಪವಲ್ಲಿ, ಜಿಲ್ಲಾ ಖಜಾಂಚಿಗಳಾದ ಡಾ. ಕೆ.ಬಿ. ಗುರುಮೂರ್ತಿ ರವರು ಭೇಟಿ ನೀಡಿ ಮಕ್ಕಳಿಗೆ ಶುಭ ಹಾರೈಸಿದರು.

ಶಿಬಿರದಲ್ಲಿ ಸಂಪನ್ಮೂಲ ವ್ಯಕ್ತಿಗಳಾಗಿ ಶ್ರೀಮತಿ ಸುಜಯಾ, ಶ್ರೀ ಎಂ.ವಿ. ಅಮರ್‌ನಾಥ್, ಶ್ರೀ ಅಜಯ ಕುಮಾರ್ ಜೈನ್, ಶ್ರೀ ಎಂ.ಆರ್. ಶ್ರೀರಾಂ, ಶ್ರೀ ಆರ್.ಪಿ. ಚಂದ್ರು ರವರುಗಳು ಕಾರ್ಯನಿರ್ವಹಿಸಿದರು. ಶಿಬಿರದ ಮೇಲ್ವಿಚಾರಕರಾಗಿ ಶ್ರೀ ಆರ್.ಪಿ. ಚಂದ್ರು ರವರು ಕಾರ್ಯ ನಿರ್ವಹಿಸಿದರು.

## ರಾಯಚೂರು

ಜುಲೈ 13 ರಂದು ರಾಯಚೂರು ಜಿಲ್ಲೆಯ ಮಾನವಿ ಸ್ಥಳೀಯ ಸಂಸ್ಥೆಯಿಂದ ತಾಲ್ಲೂಕು ಮಟ್ಟದ "ದೇಶಭಕ್ತಿಗೀತೆಗಳ ಗೀತಗಾಯನ" ಸ್ಪರ್ಧೆಯನ್ನು ಮಾನವಿ ನಗರದ ಶ್ರೀ ಪಂಪಾ ವಿರೂಪಾಕ್ಷೇಶ್ವರ ಶಾಲೆಯ ಸಭಾಂಗಣದಲ್ಲಿ ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮದಲ್ಲಿ ಶ್ರೀ ರೇವಣಸಿದ್ಧಯ್ಯ, ಉಪನ್ಯಾಸಕರು ಸ.ಪು. ಪೂ. ಕಾಲೇಜು, "ಮಾನವನ ಬೆಳವಣಿಗೆಗಾಗಿ ಶಾಲಾ ದಿನಗಳಿಂದಲೇ ಸ್ಕೌಟ್ಸ್-ಗೈಡ್ಸ್ ಶಿಕ್ಷಣ ನೀಡುವುದು ಅವಶ್ಯಕ. ಉತ್ತಮ ಸದ್ಗುಣಗಳ ಭದ್ರಬುನಾದಿಗೆ ಇಂಥ ಶಿಕ್ಷಣ ಮಕ್ಕಳಿಗೆ ನೀಡುವುದು ಉತ್ತಮವಾಗಿದೆ" ಎಂದು ಅಭಿಪ್ರಾಯಪಟ್ಟರು. ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿ ಕಲ್ಮಠ ಪ್ರೌಢಶಾಲೆಯ ಮುಖ್ಯ ಗುರು ಶ್ರೀ ಪ್ರಭಯ್ಯಸ್ವಾಮಿ ಮಾತನಾಡಿ ಮಕ್ಕಳಿಗೆ ಬಾಲ್ಯದಿಂದಲೇ ಶಿಕ್ಷಣದ ಜೊತೆಯಲ್ಲಿ ಪಠ್ಯೇತರ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುವಂತೆ ಪ್ರೇರೇಪಿಸಿ ಅವರ ಉಜ್ವಲ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ಶಿಕ್ಷಕರು ಪ್ರಾಮಾಣಿಕವಾಗಿ ಪ್ರಯತ್ನಿಸಲು ಸಲಹೆ ನೀಡಿದರು.



ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಸಂಸ್ಥೆಯ ಅಧ್ಯಕ್ಷ ಶ್ರೀ ಬಿ. ಬಲರಾಮಕೃಷ್ಣ ವಹಿಸಿ ಮಾತನಾಡಿ, ಮಕ್ಕಳಲ್ಲಿ ದೇಶಾಭಿಮಾನ ಬೆಳೆಸುವಲ್ಲಿ ಸಂಸ್ಥೆಯಿಂದ ಪ್ರತಿವರ್ಷ ಗೀತಗಾಯನ ಸ್ಪರ್ಧೆ ಏರ್ಪಡಿಸಲಾಗುತ್ತಿದೆ ಎಂದರು. ಸಂಸ್ಥೆಯ ಜಂಟಿ ಕಾರ್ಯದರ್ಶಿ ಶ್ರೀ ನರಸಿಂಹಮೂರ್ತಿ ದೇಸಾಯಿ ಪ್ರಾಸ್ತಾವಿಕವಾಗಿ ಮಾತನಾಡಿದರು. ಸ್ಪರ್ಧೆಯ ನಿರ್ಣಾಯಕರಾಗಿ ಸಂಗೀತ ಶಿಕ್ಷಕರಾದ ಶ್ರೀಮತಿ ಲಕ್ಷ್ಮೀದೇವಿ, ಶ್ರೀ ವಂದಲಿ ಹಿರೇಮಠ ಕಾರ್ಯ ನಿರ್ವಹಿಸಿದರು. ಈ ಸ್ಪರ್ಧೆಯಲ್ಲಿ ಸ್ಕೌಟ್ಸ್-ಗೈಡ್ಸ್ ವಿಭಾಗದಲ್ಲಿ ಪ್ರಥಮ ಸ್ಥಾನ ಮಾಂಟೆಸ್ಸರಿ ಪಬ್ಲಿಕ್ ಶಾಲೆ, ಮಾನವಿ, ದ್ವಿತೀಯ ಸ್ಥಾನ ಕಾಕತೀಯ ಶಾಲೆ, ಮಾನವಿ, ತೃತೀಯ ಸ್ಥಾನ ಗುರುಕುಲ



ಶಾಲೆ, ಮಾನವಿ. ಕಬ್ಸ್-ಬುಲ್ಸ್ ನಲ್ಲಿ ಪ್ರಥಮ ಸ್ಥಾನ ಸ್ನೇಹಜ್ಯೋತಿ ವಿದ್ಯಾಲಯ ಪೋತ್ನಾಳ, ದ್ವಿತೀಯ ಕಾಕತೀಯ ಶಾಲೆ, ಮಾನವಿ, ತೃತೀಯ ಮಾಂಟೆಸ್ಸರಿ ಪಬ್ಲಿಕ್ ಶಾಲೆ, ಮಾನವಿ ಪಡೆದುಕೊಂಡವು. ಈ ಕಾರ್ಯಕ್ರಮದಲ್ಲಿ ವಿವಿಧ ಶಾಲೆಯ 155 ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್‌ಗಳು ಭಾಗವಹಿಸಿದ್ದರು.

* ಜೂನ್ 18 ರಂದು 2019-20ನೇ ಸಾಲಿನ ವಾರ್ಷಿಕ ಪ್ರಗತಿ ಪರಿಶೀಲನೆ, ರಾಯಚೂರು ಜಿಲ್ಲಾ ಸ್ಕೌಟ್ ಭವನದಲ್ಲಿ ನಡೆಯಿತು. ಈ ಸಭೆಯಲ್ಲಿ ರಾಜ್ಯಪ್ರಧಾನ ಕಾರ್ಯಾಲಯ ದಿಂದ ರಾಜ್ಯ ಸಂಘಟನಾ ಆಯುಕ್ತರಾದ ಶ್ರೀ ಎಂ. ಪ್ರಭಾಕರ್ ಭಟ್ ಹಾಗೂ ಶ್ರೀಮತಿ ಅಜೀಜಾ ಸುಲ್ತಾನ ರವರು ಅಗಮಿಸಿ ರಾಯಚೂರು ಜಿಲ್ಲೆಯ ಸ್ಕೌಟ್ಸ್-ಗೈಡ್ಸ್ ಚಳುವಳಿಯ ಪ್ರಗತಿಯನ್ನು ಪರಿಶೀಲಿಸಿ, ಸ್ಥಳೀಯ ಮತ್ತು ಜಿಲ್ಲಾ ಮಟ್ಟದಲ್ಲಿ ಗಣತಿ ಹೆಚ್ಚಳಕ್ಕೆ ಸಲಹೆ ನೀಡಿದರು. ಸಂಸ್ಥೆಯ ಆರ್ಥಿಕ ವ್ಯವಹಾರಗಳನ್ನು ಪರಿಶೀಲಿಸಿ, ಅನುದಾನಗಳ ಬಗ್ಗೆ ತಿಳಿಸಿದರು. ಈ ಸಭೆಯಲ್ಲಿ ಸ್ಥಳೀಯ ಸಂಸ್ಥೆಯ ಅಧ್ಯಕ್ಷರು ಮತ್ತು ಕಾರ್ಯದರ್ಶಿಗಳು ಹಾಗೂ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು.

* ಜೂನ್ 30ರಂದು ಜಿಲ್ಲಾ ಸಂಸ್ಥೆ ರಾಯಚೂರು ಹಾಗೂ ಸುಗುಣಾ ಶಿಕ್ಷಣ ಸಂಸ್ಥೆಯ ಬಸವಶ್ರೀ ಶಾಲೆ, ರಾಯಚೂರು ಇವರುಗಳ ಸಹಯೋಗದಲ್ಲಿ ಸ್ಕೌಟ್ಸ್-ಗೈಡ್ಸ್ ಪ್ರಾರಂಭಿಕ ಮಾಹಿತಿ ಶಿಬಿರವನ್ನು ಬಸವಶ್ರೀ ಶಾಲೆಯಲ್ಲಿ ಹಮ್ಮಿಕೊಳ್ಳಲಾಗಿತ್ತು. ಈ ಶಿಬಿರವನ್ನು ಉದ್ದೇಶಿಸಿ ಶ್ರೀಮತಿ ಲಲಿತಾ ಎಂ. ಮುಖ್ಯ ಗುರುಗಳು ಬಸವಶ್ರೀ ಶಾಲೆ ಹಾಗೂ ಜಿಲ್ಲಾ ಸಹಾಯಕ ಆಯುಕ್ತರು, ಭಾರತ್ ಸ್ಕೌಟ್ಸ್-ಗೈಡ್ಸ್ ಕರ್ನಾಟಕ, ಜಿಲ್ಲಾ ಸಂಸ್ಥೆ ರಾಯಚೂರು ಇವರು ಮಾತನಾಡಿ ದೇಶದ ಅಭಿವೃದ್ಧಿಗೆ ಯುವ ಜನತೆ ಪಾತ್ರ ಬಹು

ಮುಖ್ಯವಾದುದಾಗಿದೆ. ಆ ನಿಟ್ಟಿನಲ್ಲಿ ಸ್ಕೌಟ್-ಗೈಡ್ ಚಳುವಳಿಯು ಉತ್ತಮ ಸೇವಾ ಮನೋಭಾವ, ದೇಶಾಭಿಮಾನ, ನಾಯಕತ್ವ ಗುಣ, ಶಿಸ್ತು, ಸಂಯಮ, ಇತ್ಯಾದಿ ಮೌಲ್ಯಗಳನ್ನು ಬೆಳೆಸುವಲ್ಲಿ ಸಹಾಯಕವಾಗಿದೆ. ಸ್ಕೌಟ್ಸ್-ಗೈಡ್ಸ್ ಮೌಲ್ಯ ಶಿಕ್ಷಣದ ಬೆನ್ನೆಲುಬಾಗಿ ನಿಂತಿದೆ ಎಂದರು. ಮುಖ್ಯ ಅತಿಥಿಗಳಾಗಿ ಶ್ರೀಮತಿ ಅಜಿಜಾ ಸುಲ್ತಾನಾ, ಜಿಲ್ಲಾ ಮುಖ್ಯ ಆಯುಕ್ತರು, ಮಾತನಾಡಿ ಸ್ಕೌಟಿಂಗ್-ಗೈಡಿಂಗ್ ಅಂತರ ರಾಷ್ಟ್ರೀಯ ಸೇವಾ ಮನೋಭಾವ ಬೆಳೆಸಲು ಸಹಾಯಕವಾಗಿದೆ. ಶಿಕ್ಷಣ ಇಲಾಖೆಯ ಸಹಯೋಗದೊಂದಿಗೆ ಪ್ರಗತಿಯತ್ತ ಸಾಗುತ್ತಿದೆ. ಸ್ಕೌಟ್ಸ್-ಗೈಡ್ಸ್ ಇತಿಹಾಸ ಶಿಕ್ಷಕರಿಗೆ ಪರಿಚಯಿಸಿ, ಸ್ಕೌಟ್ಸ್-ಗೈಡ್ಸ್ ಶಿಕ್ಷಣ ಎಲ್ಲಾ ಶಾಲೆಗಳಲ್ಲಿ ಅವಶ್ಯಕವಾಗಿದೆ ಎಂದರು. ಈ ಸಂದರ್ಭದಲ್ಲಿ ವಿವಿಧ ಶಾಲೆಗಳಿಂದ ಆಗಮಿಸಿದ ಶಿಕ್ಷಕರು ಶ್ರೀ ರಾವುತ್‌ರಾವ್ ಬರೂರ್, ಶ್ರೀ ದೇವೇಂದ್ರ ಕಟ್ಟಿಮನಿ, ಸ್ಕೌಟ್ಸ್-ಗೈಡ್ಸ್‌ಗಳು ಉಪಸ್ಥಿತರಿದ್ದರು. ಶಿಕ್ಷಕಿ ಶ್ರೀಮತಿ ವಿಜಯಲಕ್ಷ್ಮಿ ಇವರು ನಿರೂಪಿಸಿ ವಂದಿಸಿದರು.

* ಜೂನ್ 21ರಂದು ಅಂತರರಾಷ್ಟ್ರೀಯ ಯೋಗ ದಿನಾಚರಣೆಯನ್ನು ಜಿಲ್ಲಾ ಸಂಸ್ಥೆ ರಾಯಚೂರು ಹಾಗೂ ಬಸವಶ್ರೀ ಶಾಲೆಯ ಸಂಯುಕ್ತ ಆಶ್ರಯದಲ್ಲಿ ಹಮ್ಮಿಕೊಳ್ಳಲಾಯಿತು. ಈ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾಗಿ ಶ್ರೀ ರಾಜಶೇಖರ್, ಉಪನ್ಯಾಸಕರು, ಶ್ರೀಮತಿ ಲಲಿತಾ ಎಂ. ಶ್ರೀಮತಿ ಆಲಿಯಾಖಾನಂ, ಶ್ರೀ ಎಲ್.ಬಿ. ಹೊರಪೇಟೆ, ಶ್ರೀ ಬಸವರಾಜ ಬೋರೆಡ್ಡಿ, ಶ್ರೀಮತಿ ವಿಜಯಲಕ್ಷ್ಮಿ, ಶ್ರೀ ದೇವೇಂದ್ರ ಕಟ್ಟಿಮನಿ, ಶಾಲೆಯ ಶಿಕ್ಷಕರು ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

* ಜೂನ್ 19ರಂದು ಪರಿಸರ ದಿನಾಚರಣೆ ಪ್ರಯುಕ್ತ ನಡೆದ ಬೀಜದುಂಡೆ ಅಭಿಯಾನ ಹಾಗೂ ಭಾರತ್ ಸ್ಕೌಟ್ಸ್-ಗೈಡ್ಸ್ ವಾರ್ಷಿಕ ಕ್ರಿಯಾ ಯೋಜನೆ ಪುಸ್ತಕ ಬಿಡುಗಡೆ ಸಮಾರಂಭವನ್ನು ಜಿಲ್ಲಾ ಆಡಳಿತ, ಸಾರ್ವಜನಿಕ ಶಿಕ್ಷಣ ಇಲಾಖೆ, ರಾಯಚೂರು, ಅರಣ್ಯ ಇಲಾಖೆ, ಜಿಲ್ಲಾ ಕಾನೂನು ಸೇವೆಗಳ ಪ್ರಾಧಿಕಾರ, ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ, ರಾಯಚೂರು ಹಾಗೂ ಆದರ್ಶ ವಿದ್ಯಾಲಯ ಇವರುಗಳ ಸಂಯುಕ್ತ ಆಶ್ರಯದಲ್ಲಿ, ಆದರ್ಶ ವಿದ್ಯಾಲಯ ಶಾಲೆ, ಯರಮರಸ್ ಇಲ್ಲಿ ಹಮ್ಮಿಕೊಳ್ಳಲಾಯಿತು. ಈ ಕಾರ್ಯಕ್ರಮವನ್ನು ಜಿಲ್ಲಾ ಕಾನೂನು ಸೇವೆಗಳ ಪ್ರಾಧಿಕಾರದ ಕಾರ್ಯದರ್ಶಿಗಳಾದ ಶ್ರೀ ಎಂ.ಸಿ. ನಾಡಗೌಡ ರವರು ಸಸಿಗೆ ನೀರು ಹಾಕುವ ಮೂಲಕ ಉದ್ಘಾಟಿಸಿ ಮಾತನಾಡಿ. ಗಿಡ, ಮರಗಳನ್ನು ಪೋಷಿಸಿ ಪರಿಸರ ಸಂರಕ್ಷಣೆಯ ಹೊಣೆ ನಮ್ಮೆಲ್ಲರದು ಎಂದು ಸಲಹೆ ನೀಡಿದರು. ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರಾದ ಶ್ರೀ ಬಿ.ಕೆ. ನಂದನೂರು ರವರು ಮಾತನಾಡಿ, ಮಕ್ಕಳಲ್ಲಿ, ಪರಿಸರದ ಪ್ರಜ್ಞೆ ಬೆಳೆಸುವುದು ಶಿಕ್ಷಣ ಇಲಾಖೆಯ ಮಹತ್ತರ ಜವಾಬ್ದಾರಿಯಾಗಿದೆ ಎಂದು ಹೇಳಿದರು. ಈ ಸಂದರ್ಭದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಚಂದ್ರಶೇಖರ್ ದೊಡ್ಡಮನಿ, ಅರಣ್ಯ ಇಲಾಖೆಯ ಅಧಿಕಾರಿಗಳು, ಪ್ರೌಢಶಾಲೆಗಳ ಮುಖ್ಯೋಪಾಧ್ಯಾಯರು, ಶ್ರೀ ಸೈಯದ್ ಸಿರಾಜ, ಮುಖ್ಯ ಆಯುಕ್ತರಾದ ಶ್ರೀಮತಿ ಅಜೀಜಾ ಸುಲ್ತಾನಾ, ಆಲಿಯಾ ಖಾನಂ, ನಾಗೇಶ, ರಾಹುತ್‌ರಾವ್ ಬರೂರ, ವಿಜಯಲಕ್ಷ್ಮಿ, ಕವಿತಾ ಶಂಪಾದ್ ಬೇಗಂ, ಶ್ರೀಧರ್ ದೇವೇಂದ್ರ ಕಟ್ಟಿಮನಿ ಉಪಸ್ಥಿತರಿದ್ದರು. 110 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿ 7000 ಕ್ಕಿಂತ ಹೆಚ್ಚು ಬೀಜದುಂಡೆಗಳನ್ನು ತಯಾರಿಸಿದರು.

* ಜೂನ್ 29ರಂದು ನವಚೇತನ ಶಾಲೆ ರಾಯಚೂರು ಇಲ್ಲಿ ಸ್ಕೌಟ್ಸ್-ಗೈಡ್ಸ್‌ಗಳಿಗೆ ದೀಕ್ಷಾ ಸಮಾರಂಭವನ್ನು ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮದಲ್ಲಿ ಸ್ಥಳೀಯ ಸಂಸ್ಥೆಯ ಹಾಗೂ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳಾದ ಶ್ರೀಮತಿ ಅಜೀಜಾ ಸುಲ್ತಾನ, ಶ್ರೀಮತಿ ಆಲಿಯಾ ಖಾನಂ, ಶ್ರೀ ಆರ್. ಹೆಚ್. ಸಾಗರ್, ಶಾಲಾ ಆಡಳಿತ ಮಂಡಳಿಯ ಶ್ರೀ ರಾಮಚಂದ್ರ ಪ್ರಭು, ಶ್ರೀ ನಿತ್ಯಾನಂದ ಶ್ರೀಮತಿ ಅನ್ನಪೂರ್ಣ ಉಪಸ್ಥಿತರಿದ್ದರು.

* ಜೂನ್ 11ರಂದು ಸ್ವಚ್ಛ ಭಾರತ್ ಮಿಷನ್ (ಗ್ರಾ) ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಜಿಲ್ಲಾಡಳಿತ, ಜಿಲ್ಲಾ ಪಂಚಾಯತ್ ರಾಯಚೂರು ಹಾಗೂ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ರಾಯಚೂರು ಇವರುಗಳ ಸಂಯುಕ್ತಾಶ್ರಯದಲ್ಲಿ ಸ್ವಚ್ಛಮೇವ ಜಯತೇ ಆಂದೋಲನ ಜಾಗೃತಿ ಜಾಥಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮವನ್ನು ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯದರ್ಶಿ ಶ್ರೀ ನಲಿನ್ ಅತುಲ್ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಶ್ರೀಮತಿ ವಿಜಯಲಕ್ಷ್ಮೀ, ಸಹಾಯಕ ಕಾರ್ಯದರ್ಶಿ, ಜಿ.ಪಂ. ಚುನಾವಣಾ ವಿಭಾಗ ಶ್ರೀ ಬಿ.ಕೆ. ನಂದನೂರು, ಉಪನಿರ್ದೇಶಕ, ಸಾರ್ವಜನಿಕ ಶಿಕ್ಷಣ ಇಲಾಖೆ ರಾಯಚೂರು, ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು, ದೈಹಿಕ ಶಿಕ್ಷಣ ಶಿಕ್ಷಕರು, ತಾಲೂಕಿನ ಸ್ಕೌ.ಮಾ. & ಗೈ. ಕ್ಯಾ. ಹಾಗೂ 150ಕ್ಕಿಂತ ಹೆಚ್ಚಿನ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

## ಶಿವಮೊಗ್ಗ

ಜೂನ್ 5 ರಂದು ಪರಿಸರ ದಿನಾಚರಣೆಯ ನಿಮಿತ್ತ ಶಿವಮೊಗ್ಗ ಜಿಲ್ಲೆಯ ಜಿಲ್ಲಾಧಿಕಾರಿಗಳ ನೇತೃತ್ವದಲ್ಲಿ ಜಿಲ್ಲಾಧಿಕಾರಿಯವರ ಕಛೇರಿ ಆವರಣದಿಂದ ಪ್ರಾರಂಭಿಸಿ ಶಿವಮೊಗ್ಗದ ಪ್ರಮುಖ ಬೀದಿಗಳನ್ನು ಸ್ವಚ್ಛಗೊಳಿಸಲಾಯಿತು. ಈ ಕಾರ್ಯಕ್ರಮದಲ್ಲಿ ನಗರದ ವಿವಿಧ ಶಾಲೆಯ ಸುಮಾರು 50 ಸ್ಕೌಟ್ಸ್, 50 ಗೈಡ್ಸ್‌ಗಳು ಭಾಗವಹಿಸಿ ಕೆಲವು ಪ್ರದೇಶಗಳನ್ನು ಸ್ವಚ್ಛಗೊಳಿಸಿ ನಂತರದಲ್ಲಿ ಗಿಡಗಳನ್ನು ನೆಟ್ಟು ಆ ಗಿಡಗಳನ್ನು ಪೋಷಿಸುವುದಾಗಿ ಜಿಲ್ಲಾಧಿಕಾರಿಗಳೊಂದಿಗೆ ಪ್ರತಿಜ್ಞೆಮಾಡಿದರು.

ಈ ಕಾರ್ಯಕ್ರಮದಲ್ಲಿ ಜಿಲ್ಲಾಧಿಕಾರಿಗಳಾದ ಶ್ರೀ ಕೆ.ಎ. ದಯಾನಂದ, ಭಾ.ಆ.ಸೇ. ಶ್ರೀ ಎ.ವಿ. ರಾಜೇಶ್, ಎ.ಎಲ್.ಟಿ. (ರೋ) ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಡಿ.ಎನ್.ನೂರ್ ಅಹಮ್ಮದ್, ಜಿಲ್ಲಾ ತರಬೇತಿ ಆಯುಕ್ತರು (ಗೈಡ್ಸ್) ಶ್ರೀಮತಿ ಸಿ.ಎಸ್. ಕಾತ್ಯಾಯಿನಿ, ಶ್ರೀಮತಿ ಶಾಂತಮ್ಮ, ಹಿರಿಯ ಗೈಡರ್, ಶ್ರೀಮತಿ ಅನಿತ ಗೈಡ್ ಕ್ಯಾಪ್ಟನ್ ಹಾಗೂ ಇತರೇ ಸಂಘ ಸಂಸ್ಥೆಯ ಪದಾಧಿಕಾರಿಗಳು ಹಾಗೂ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

* ಜೂನ್ 11ರಂದು ಹೊಸನಗರ ತಾಲ್ಲೂಕಿನ ಸರ್ಕಾರಿ ಪದವಿ ಪೂರ್ವ ಕಾಲೇಜು (ಪ್ರೌಢಶಾಲಾ ವಿಭಾಗ) ಶಾಲಾ ಮುಖ್ಯಸ್ಥರಿಗೆ ಸ್ಕೌಟಿಂಗ್-ಗೈಡಿಂಗ್ ಮಾಹಿತಿ ಕಾರ್ಯಾಗಾರವನ್ನು ಏರ್ಪಡಿಸಲಾಗಿತ್ತು. ಈ ಕಾರ್ಯಾಗಾರಕ್ಕೆ ತಾಲ್ಲೂಕಿನ ವಿವಿಧ ಶಾಲೆಯ 13ಮುಖ್ಯೋಪಾಧ್ಯಾಯರು ಭಾಗವಹಿಸಿದ್ದರು, ನಂತರ ಮಧ್ಯಾಹ್ನ ಶಿಕ್ಷಕ-ಶಿಕ್ಷಕಿಯರುಗಳಿಗೆ ಪ್ರಾರಂಭಿಕ ಮಾಹಿತಿ ಶಿಬಿರವನ್ನು ಏರ್ಪಡಿಸಲಾಗಿತ್ತು. ಈ ಶಿಬಿರಕ್ಕೆ ತಾಲ್ಲೂಕಿನ ವಿವಿಧ ಶಾಲೆಯ 10 ಶಿಕ್ಷಕ-ಶಿಕ್ಷಕಿಯರು ಭಾಗವಹಿಸಿದ್ದರು.

* ಜೂನ್ 15ರಂದು ಶಿವಮೊಗ್ಗ ಜಿಲ್ಲಾ ಸ್ಕೌಟ್ ಭವನದಲ್ಲಿ ತಾಲ್ಲೂಕು ಮಟ್ಟದ ಶಾಲಾ ಮುಖ್ಯಸ್ಥರಿಗೆ ಸ್ಕೌಟಿಂಗ್-ಗೈಡಿಂಗ್ ಮಾಹಿತಿ ಕಾರ್ಯಾಗಾರ ಮತ್ತು ಶಿಕ್ಷಕ-ಶಿಕ್ಷಕಿಯರುಗಳಿಗೆ ಪ್ರಾರಂಭಿಕ ಮಾಹಿತಿ ಶಿಬಿರವನ್ನು ಏರ್ಪಡಿಸಲಾಗಿತ್ತು. ತಾಲ್ಲೂಕಿನ ವಿವಿಧ ಶಾಲೆಯ 106 ಮುಖ್ಯೋಪಾಧ್ಯಾಯರುಗಳು ಭಾಗವಹಿಸಿದ್ದರು. ಮುಖ್ಯೋಪಾಧ್ಯಾಯರುಗಳಿಗೆ ಸ್ಕೌಟಿಂಗ್-ಗೈಡಿಂಗ್‌ನ ಮಾಹಿತಿ ಪುಸ್ತಕ, ಸ್ಕೌಟ್ಸ್-ಗೈಡ್ಸ್ ಕೈಪಿಡಿ ಹಾಗು ಅಭಿನಂದನ ಪತ್ರವನ್ನು ನೀಡಲಾಯಿತು.



ನಂತರ ಈ ಕಾರ್ಯಾಗಾರಕ್ಕೆ ಆಗಮಿಸಿದ್ದಂತಹ ಕೆಲವು ಮುಖ್ಯ ಶಿಕ್ಷಕ/ಶಿಕ್ಷಕಿಯರುಗಳು ಈ ಕಾರ್ಯಾಗಾರದ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಈ ಸಮಾವೇಶದ ಹಾಗೂ ಪ್ರಾರಂಭದ ಶಿಬಿರದ ನಾಯಕತ್ವವನ್ನು ಶ್ರೀಮತಿ ಭಾರತಿ ಡಾಯಸ್, ಎ.ಎಸ್.ಓ.ಸಿ.(ಗೈಡ್ಸ್) ರವರು ನಿರ್ವಹಿಸಿದ್ದು, ಈ ಕಾರ್ಯಾಗಾರಕ್ಕೆ ಆಗಮಿಸಿದ ಎಲ್ಲಾ ಮುಖ್ಯೋಪಾಧ್ಯಾಯರುಗಳಿಗೆ ಮತ್ತು ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳಿಗೆ ವಂದಿಸಿದರು.

ಈ ಶಿಬಿರದಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್‌ನ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಹೆಚ್.ಡಿ. ರಮೇಶಶಾಸ್ತ್ರಿ, ಜಿಲ್ಲಾ ಆಯುಕ್ತರು(ಸ್ಕೌಟ್ಸ್) ಶ್ರೀ ಎಸ್. ಉಮೇಶ ಶಾಸ್ತ್ರೀ, ಜಿಲ್ಲಾ ಆಯುಕ್ತರು (ಗೈಡ್ಸ್) ಶ್ರೀಮತಿ ಶಕುಂತಲಾ ಚಂದ್ರಶೇಖರ್ ಹಾಗೂ ಇತರೆ ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು.

ನಂತರ ಮಧ್ಯಾಹ್ನ ಶಿಕ್ಷಕ-ಶಿಕ್ಷಕಿಯರುಗಳಿಗೆ ಪ್ರಾರಂಭಿಕ ಮಾಹಿತಿ ಶಿಬಿರವು ಪ್ರಾರಂಭವಾಯಿತು. ಈ ಕಾರ್ಯಕ್ರಮಕ್ಕೆ ತಾಲ್ಲೂಕಿನ ವಿವಿಧ ಶಾಲೆಯ 13ಶಿಕ್ಷಕ/ಶಿಕ್ಷಕಿಯರು ಭಾಗವಹಿಸಿದ್ದರು. ನಂತರ ಸ್ಕೌಟಿಂಗ್ ಮತ್ತು ಗೈಡಿಂಗ್‌ನ ಮಾಹಿತಿ ಪುಸ್ತಕ, ಸ್ಕೌಟ್ಸ್-ಗೈಡ್ಸ್ ಕೈಪಿಡಿ ಹಾಗೂ ಪ್ರಾರಂಭಿಕ ಶಿಬಿರದ ಪ್ರಮಾಣಪತ್ರವನ್ನು ನೀಡಲಾಯಿತು. ಕೊನೆಯಲ್ಲಿ ಜಿಲ್ಲಾ ಸಹ ಕಾರ್ಯದರ್ಶಿ ಶ್ರೀ ವೈ.ಆರ್. ವೀರೇಶಪ್ಪ ರವರು ವಂದನೆಗಳನ್ನು ಸಲ್ಲಿಸಿದರು.

* ಜೂನ್ 17ರಂದು ಭದ್ರಾವತಿ ತಾಲ್ಲೂಕಿನ ಸೇಂಟ್ ಜೋಸೆಫ್ ಶಾಲೆಯಲ್ಲಿ ಬೆಳಿಗ್ಗೆ 10 ರಿಂದ ಮಧ್ಯಾಹ್ನ 12ರ ವರೆಗೆ ಶಾಲಾ ಮುಖ್ಯಸ್ಥರಿಗೆ ಸ್ಕೌಟಿಂಗ್-ಗೈಡಿಂಗ್ ಮಾಹಿತಿ ಕಾರ್ಯಾಗಾರವನ್ನು ಏರ್ಪಡಿಸಲಾಗಿತ್ತು. ಈ ಶಿಬಿರಕ್ಕೆ ತಾಲ್ಲೂಕಿನ ವಿವಿಧ ಶಾಲೆಯ 26 ಮುಖ್ಯೋಪಾಧ್ಯಾಯರು ಭಾಗವಹಿಸಿದ್ದರು. ಮುಖ್ಯೋಪಾಧ್ಯಾಯರಿಗೆ ಸ್ಕೌಟಿಂಗ್

ಮತ್ತು ಗೈಡಿಂಗ್‌ನ ಮಾಹಿತಿ ಪುಸ್ತಕ, ಸ್ಕೌಟ್ಸ್-ಗೈಡ್ಸ್ ಕೈಪಿಡಿ ಹಾಗೂ ಅಭಿನಂದನ ಪತ್ರವನ್ನು ನೀಡಲಾಯಿತು. ಈ ಶಿಬಿರದ ನಾಯಕತ್ವವನ್ನು ಶ್ರೀ ಎ.ವಿ. ರಾಜೇಶ್ ರವರು ನಿರ್ವಹಿಸಿದ್ದರು.

* ಜೂನ್ 18ರಂದು ಶಿಕಾರಿಪುರ ತಾಲ್ಲೂಕಿನ ಗುರುಭವನದಲ್ಲಿ ಶಾಲಾ ಮುಖ್ಯಸ್ಥರಿಗೆ ಸ್ಕೌಟಿಂಗ್-ಗೈಡಿಂಗ್ ಮಾಹಿತಿ ಕಾರ್ಯಾಗಾರವನ್ನು ಏರ್ಪಡಿಸಲಾಗಿತ್ತು. ಈ ಶಿಬಿರಕ್ಕೆ ತಾಲ್ಲೂಕಿನ ವಿವಿಧ ಶಾಲೆಯ 52 ಮುಖ್ಯೋಪಾಧ್ಯಾಯರು ಭಾಗವಹಿಸಿದ್ದರು. ಮುಖ್ಯೋಪಾಧ್ಯಾಯರಿಗೆ ಸ್ಕೌಟಿಂಗ್ ಮತ್ತು ಗೈಡಿಂಗ್‌ನ ಮಾಹಿತಿ ಪುಸ್ತಕ, ಸ್ಕೌಟ್ಸ್-ಗೈಡ್ಸ್ ಕೈಪಿಡಿ ಹಾಗೂ ಅಭಿನಂದನ ಪತ್ರವನ್ನು ನೀಡಲಾಯಿತು. ಈ ಶಿಬಿರದ ನಾಯಕತ್ವವನ್ನು ಶ್ರೀಮತಿ ಸಿ.ಎಸ್. ಕಾತ್ಯಾಯಿನಿ ಎ.ಎಲ್.ಟಿ.(ಗೈ) ನಿರ್ವಹಿಸಿದರು. ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಬಿ.ಸಿ. ವೇಣುಗೋಪಾಲ್, ಕ್ಷೇತ್ರ ಸಂಪನ್ಮೂಲ ಅಧಿಕಾರಿ ಶ್ರೀ ಮುರಳೀಧರ, ಶಿಕಾರಿಪುರ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ರಾಮಚಂದ್ರಪ್ಪ , ಸಹ ಕಾರ್ಯದರ್ಶಿ ಶ್ರೀ ತಿಪ್ಪೇಶ ಹಾಗೂ ಇತರೆ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು.

* ಜೂನ್ 19ರಂದು ಸ.ಪ್ರೌ.ಶಾಲೆ, ಸುಭಾಷ್ ನಗರ, ಸಾಗರದಲ್ಲಿ ಶಾಲಾ ಮುಖ್ಯಸ್ಥರಿಗೆ ಸ್ಕೌಟಿಂಗ್-ಗೈಡಿಂಗ್ ಮಾಹಿತಿ ಕಾರ್ಯಾಗಾರವನ್ನು ಏರ್ಪಡಿಸಲಾಗಿತ್ತು. ಈ ಕಾರ್ಯಾಗಾರಕ್ಕೆ ತಾಲ್ಲೂಕಿನ ವಿವಿಧ ಶಾಲೆಯ 71 ಮುಖ್ಯೋಪಾಧ್ಯಾಯರುಗಳು ಭಾಗವಹಿಸಿದ್ದರು. ನಂತರ ಶಿಕ್ಷಕ-ಶಿಕ್ಷಕಿಯರುಗಳಿಗೆ ಪ್ರಾರಂಭಿಕ ಮಾಹಿತಿ ಶಿಬಿರವನ್ನು ಏರ್ಪಡಿಸಲಾಗಿತ್ತು. ಈ ಎರಡು ಶಿಬಿರಗಳ ನಾಯಕತ್ವವನ್ನು ಶ್ರೀ ಗಣಪತಿ ಎಲ್.ಟಿ.(ರೋ) ರವರು ನಿರ್ವಹಿಸಿದ್ದರು. ಸಾಗರದ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ರಂಗಪ್ಪ, ಶ್ರೀಮತಿ ಸರಸ್ವತಿ ನಾಗರಾಜ್, ನಗರ ಸಭೆ ಸದಸ್ಯರಾದ ಶ್ರೀಮತಿ ಕುಸುಮ ಸುಬ್ಬಣ್ಣ ಹಾಗೂ ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು ಉಪಸ್ಥಿತರಿದ್ದರು.

* ಜೂನ್ 22ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಮತ್ತು ಸ್ಥಳೀಯ ಸಂಸ್ಥೆವತಿಯಿಂದ ಪರಿಸರ ದಿನಾಚರಣೆ ಪ್ರಯುಕ್ತ ಬೀಜದುಂಡೆ ಸಿದ್ಧಪಡಿಸುವಿಕೆ, ಅಂತರಾಷ್ಟ್ರೀಯ ಯೋಗ ದಿನಾಚರಣೆ ಹಾಗೂ 2019-20ನೇ ಸಾಲಿನ ಕಾರ್ಯ ಚಟುವಟಿಕೆ ಯೋಜನೆ ಪುಸ್ತಕ ಬಿಡುಗಡೆ ಸಮಾರಂಭವನ್ನು ಏರ್ಪಡಿಸಲಾಗಿತ್ತು. ಈ ಕಾರ್ಯಕ್ರಮವು ಸಾಮೂಹಿಕ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು. ಜಿಲ್ಲಾ ಕಾರ್ಯದರ್ಶಿ ಶ್ರೀ ಕೆ.ಪಿ. ಬಿಂದುಕುಮಾರ್ ಅವರು ಸ್ವಾಗತಿಸಿದರು, ಯೋಗ ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳಾಗಿ ಆಗಮಿಸಿದಂತಹ ಯೋಗ ಶಿಕ್ಷಕಿ ಶ್ರೀಮತಿ ವಿಜಯಕುಮಾರಿ ಯೋಗಭ್ಯಾಸದ ಮಹತ್ವ ಮತ್ತು ಉಪಯೋಗಗಳನ್ನು ಮಕ್ಕಳಿಗೆ ತಿಳಿಸಿದರು ಮತ್ತು ಮಕ್ಕಳಿಗೆ ಓಂಕಾರ ಮತ್ತು ಕೆಲವು ಸುಲಭ ಯೋಗಾಸನಗಳನ್ನು ಪ್ರಾತ್ಯಕ್ಷಿಕೆಯ ಮೂಲಕ ಹೇಳಿಕೊಟ್ಟರು.

ಪರಿಸರ ದಿನಾಚರಣೆಯ ಪ್ರಯುಕ್ತ ಏರ್ಪಡಿದ್ದ ಬೀಜದುಂಡೆ ಸಿದ್ಧಪಡಿಸುವ ಕಾರ್ಯಕ್ರಮಕ್ಕೆ ಶಿವಮೊಗ್ಗ ಜಿಲ್ಲಾಧಿಕಾರಿ ಶ್ರೀ ಕೆ.ಎ. ದಯಾನಂದ ರವರು ಬೀಜದುಂಡೆ ತಯಾರಿಸುವ ಮೂಲಕ ಚಾಲನೆ ನೀಡಿ 2019-20ನೇ ಸಾಲಿನ ಕಾರ್ಯ ಚಟುವಟಿಕೆಗಳ ಯೋಜನೆ ಪುಸ್ತಕ ಬಿಡುಗಡೆ ಮಾಡಿ ಈ ಎಲ್ಲಾ ಚಟುವಟಿಕೆಗಳು ಮಕ್ಕಳ ಬೆಳವಣಿಗೆಗೆ ಮತ್ತು ವಿಕಾಸಕ್ಕೆ ಉಪಯುಕ್ತವುಗಳಾಗಿವೆ ಎಂದು ತಿಳಿಸಿದರು.

ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಹೆಚ್.ಡಿ. ರಮೇಶ್ ಶಾಸ್ತ್ರಿ, ಜಿಲ್ಲಾ ಮುಖ್ಯ ಆಯುಕ್ತರು ವಹಿಸಿ ಪರಿಸರ ದಿನಾಚರಣೆ ಮತ್ತು ಯೋಗ ದಿನಾಚರಣೆಗಳು ಕೇವಲ ಒಂದು ದಿನಕ್ಕೆ ಸೀಮಿತವಾಗಿರದೆ ಜೀವನದುದ್ದಕ್ಕೂ ಅನುಸರಿಸುವಂತಿರಬೇಕು ಎಂದರು. ನಂತರ ಜಿಲ್ಲಾ ಆಯುಕ್ತರು(ಗೈ) ಶ್ರೀಮತಿ ಶಕುಂತಲಾ ಚಂದ್ರಶೇಖರ್ ರವರು ವಂದನೆಗಳನ್ನು ಸಲ್ಲಿಸಿದರು. ಈ ಕಾರ್ಯಕ್ರಮದಲ್ಲಿ ವಿವಿಧ ಶಾಲೆ ಮತ್ತು ಕಾಲೇಜಿನ 200 ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್‌ಗಳು ಹಾಜರಿದ್ದರು. ಈ ಕಾರ್ಯಕ್ರಮದ ನಿರೂಪಣೆಯನ್ನು ಶ್ರೀಮತಿ ಭಾರತಿ ಡಾಯಾಸ್‌ಸ ರಾಜ್ಯ ಸಹಾಯಕ ಸಂಘಟನಾ ಆಯುಕ್ತರು ನಿರ್ವಹಿಸಿದರು. ಈ ಕಾರ್ಯಕ್ರಮದಲ್ಲಿ ಜಿಲ್ಲಾ ಪದಾಧಿಕಾರಿಗಳು ಭಾಗವಹಿಸಿದ್ದರು.

* ಜುಲೈ 5ರಂದು ಜಿಲ್ಲಾ ಸ್ಕೌಟ್ ಭವನ ಶಿವಮೊಗ್ಗದಲ್ಲಿ 2018-19ನೇ ಸಾಲಿನ ಜಿಲ್ಲಾ ಪ್ರಗತಿ ಪರಿಶೀಲನ ಸಭೆ ಹಾಗೂ 2019-20ನೇ ಸಾಲಿನ ವಾರ್ಷಿಕ ಯೋಜನೆ ಮತ್ತು ಸಮಗ್ರ ಬೆಳವಣಿಗೆಯ ಸಭೆಯನ್ನು ಏರ್ಪಡಿಸಲಾಗಿತ್ತು. ಜಿಲ್ಲಾ ಕಾರ್ಯದರ್ಶಿ ಶ್ರೀ ಕೆ.ಪಿ. ಬಿಂದುಕುಮಾರ್‌ರವರು ಆಗಮಿಸಿದಂತಹ ಎಲ್ಲಾ ಪದಾಧಿಕಾರಿಗಳಿಗೆ ಸ್ವಾಗತವನ್ನು ಕೋರಿದರು. ಜಿಲ್ಲೆಯ ಪ್ರಗತಿಯ ವರದಿಯನ್ನು ಮಂಡಿಸಲಾಯಿತು ನಂತರ ಶ್ರೀ ಕೆ. ಗಂಗಪ್ಪಗೌಡ, ರಾಜ್ಯ ಕಾರ್ಯದರ್ಶಿಯವರು ಮಾತನಾಡುತ್ತಾ ಯಾವುದೇ ಕೆಲಸದಲ್ಲಿ ಯಶಸ್ವಿಯಾಗಬೇಕಾದರೆ ಪ್ರಾಮಾಣಿಕತೆ ಮತ್ತು



ಸತತ ಪ್ರಯತ್ನ ಅವಶ್ಯಕ, ನಾವು ಶಿಕ್ಷಕರಿಗೆ ಉತ್ತಮ ತರಬೇತಿಯನ್ನು ಮತ್ತು ಸ್ಕೌಟಿಂಗ್ ಮತ್ತು ಗೈಡಿಂಗ್ ಮಾಹಿತಿ ನೀಡುವ ಮೂಲಕ ಕಡ್ಡಾಯವಾಗಿ ಶಾಲೆಯಲ್ಲಿ ಘಟಕವನ್ನು ತೆರೆಯುವಂತೆ ಪ್ರೇರೇಪಿಸಿಬೇಕು. ಎಲ್ಲರನ್ನು ಪ್ರೀತಿಯಿಂದ ಕಾಣಬೇಕು ಹಾಗೂ ಗೌರವ ಮನೋಭಾವನೆಯನ್ನು ಹೊಂದಿರಬೇಕು ಎಂದರು.

ದಕ್ಷಿಣ ಕನ್ನಡ ಜಿಲ್ಲಾ ಮಂಗಳೂರಿನ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎನ್.ಜಿ. ಮೋಹನ್ ರವರು ದ.ಕ.ಜಿಲ್ಲೆಯ ಮಾನ್ಯ ಜಿಲ್ಲಾಧಿಕಾರಿಗಳ ಸಹಕಾರ ಉತ್ತಮವಾಗಿರುವುದರಿಂದ ಎಲ್ಲಾ ಸ್ಕೌಟ್ಸ್-ಗೈಡ್ಸ್ ಚಟುವಟಿಕೆಗಳು ಯಶಸ್ವಿಯಾಗಿ ನಡೆಯುತ್ತಿದೆ ಎಂದರು.

ಡಾ॥ ಎಸ್.ಎಂ. ರವೀಂದ್ರಗೌಡ, ನೋಡಲ್ ಆಫೀಸರ್, ಕುವೆಂಪು ವಿ.ವಿ. ರವರು ಸ್ಕೌಟಿಂಗ್-ಗೈಡಿಂಗ್ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವ ಮೂಲಕ ಅವಶ್ಯಕ ಮಾಹಿತಿಯನ್ನು ಜಿಲ್ಲಾ ಪದಾಧಿಕಾರಿಗಳಿಂದ ಪಡೆದುಕೊಂಡರು. ಈ ಸಭೆಯ ಅಧ್ಯಕ್ಷತೆಯನ್ನು ವಹಿಸಿದ ಶ್ರೀ ಹೆಚ್.ಡಿ. ರಮೇಶ ಶಾಸ್ತ್ರಿ, ಜಿಲ್ಲಾ ಮುಖ್ಯ ಆಯುಕ್ತರು ಮಾತನಾಡುತ್ತಾ ಈ ಸಭೆಯು ಅರ್ಥಪೂರ್ಣವಾಗಿದ್ದು. ಶ್ರೀ ಎನ್.ಜಿ. ಮೋಹನ್ ರವರಿಂದ ಸಾಕಷ್ಟು ಮಾಹಿತಿಯನ್ನು ಪಡೆದುಕೊಂಡಿದ್ದೇವೆ ಎಂದರು. ವಂದನಾರ್ಪಣೆಯನ್ನು ಶ್ರೀಮತಿ ಭಾರತಿ ಡಾಯಸ ಎ.ಎಸ್.ಓ.ಸಿ.(ಗೈ) ನೆರವೇರಿಸಿದರು. ಸ್ಕೌಟ್ ಭವನದಲ್ಲಿ ಸಸಿಗಳನ್ನು ನೆಡುವುದರ ಮೂಲಕ ಸಭೆಯು ಯಶಸ್ವಿಯಾಗಿ ಮುಕ್ತಾಯಗೊಂಡಿತು.



## ವಿಜಯಪುರ

ಜೂನ್ 26ರಂದು ಮುದ್ದೇಬಿಹಾಳ ಸಮೀಪದ ಆಲೂರು ಕ್ರಾಸ್ ನಲ್ಲಿರುವ ಸಾಮಾಜಿಕ ವಲಯ ಅರಣ್ಯ ಇಲಾಖೆ ನರ್ಸರಿಯಲ್ಲಿ ಮುದ್ದೇಬಿಹಾಳ ತಾಲೂಕು ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ, ಸಾಮಾಜಿಕ ಅರಣ್ಯ ಇಲಾಖೆ ಸಹಭಾಗಿತ್ವದಲ್ಲಿ ಚಿಣ್ಣರ ವನ ದರ್ಶನ, ವಿಶ್ವ ಪರಿಸರ ದಿನಾಚರಣೆ, ಸ್ಕೌಟ್ಸ್-ಗೈಡ್ಸ್ ವಾರ್ಷಿಕ ಕ್ರಿಯಾ ಯೋಜನೆ ಪುಸ್ತಕ ಬಿಡುಗಡೆ ಮಾಡಲಾಯಿತು.

ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದ ಸಾಮಾಜಿಕ ವಲಯ ಅರಣ್ಯಾಧಿಕಾರಿ ಶ್ರೀ ಸಂತೋಷಕುಮಾರ ಅಜೂರ ರವರು "ಸ್ಕೌಟ್ಸ್-ಗೈಡ್ಸ್ ಶಿಸ್ತಿಗೆ ಹೆಸರಾಗಿದೆ. ವಿದ್ಯಾರ್ಥಿಗಳು ತಾವು ಗಿಡ ನೆಟ್ಟು ಬೇರೆಯುವರಿಗೂ ನೆಡುವಂತೆ ಪ್ರೋತ್ಸಾಹಿಸಬೇಕು" ಎಂದರು.



ಸ್ಕೌಟ್ಸ್-ಗೈಡ್ಸ್ ವಾರ್ಷಿಕ ಕಾರ್ಯಕ್ರಮಗಳ ಯೋಜನಾ ಪುಸ್ತಕ ಬಿಡುಗಡೆಗೊಳಿಸಿ ಮಾತನಾಡಿದ ಮುದ್ದೇಬಿಹಾಳ ತಾಲ್ಲೂಕಿನ ತಹಶೀಲ್ದಾರ್ ಶ್ರೀ ವಿನಯಕುಮಾರ ಪಾಟೀಲ ರವರು ಜಿಲ್ಲೆಯಲ್ಲಿ ಕೇವಲ ಶೇ. 0.17 ರಷ್ಟು ಮಾತ್ರ ಅರಣ್ಯ ಪ್ರದೇಶ ಇರುವುದರಿಂದ ನಮ್ಮ ಜಿಲ್ಲೆ ನಿರಂತರ ಬರಕ್ಕೆ ಸಿಲುಕುತ್ತಿದೆ. ಇದರಿಂದ ಪಾರಾಗಲು ಹೆಚ್ಚಿನ ಪ್ರಮಾಣದಲ್ಲಿ ಅರಣ್ಯ ಬೆಳೆಸುವುದೇ ನಮ್ಮೆಲ್ಲರ ಗುರಿಯಾಗಬೇಕು ಎಂದು ಹೇಳಿದರು.

ಈ ಸಂದರ್ಭದಲ್ಲಿ ಸ್ಥಳೀಯ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಡಿ.ವಿ. ವಡವಡಗಿ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು. ದೈಹಿಕ ಶಿಕ್ಷಣಾಧಿಕಾರಿ ಶ್ರೀ ಎಚ್.ಎಲ್. ಕರಡ್ಡಿ, ಉಪ ವಲಯ ಅರಣ್ಯಾಧಿಕಾರಿ ಶ್ರೀ ಅಶೋಕ ಚವ್ಹಾಣ, ಸಮಾಜ ಸೇವಕ ಶ್ರೀ ಬಸಯ್ಯ ನಂದಿಕೇಶ್ವರಮಠ ಮಾತನಾಡಿದರು.

ಎ.ಎಸ್.ಓ.ಸಿ. ಶ್ರೀ ನಾಗೇಶ ಶಿವಪೂರ, ಉಪವಲಯ ಅರಣ್ಯಾಧಿಕಾರಿ ಶ್ರೀ ಬಸವರಾಜ ಕೊಣ್ಣೂರ, ಆಲೂರು ಗ್ರಾ.ಪಂ. ಪಿಡಿಓ ಶ್ರೀ ಅಯ್ಯಪ್ಪ ಮಲಗಲದಿನ್ನಿ, ಎಸ್.ಜಿ.ವಿ. ರಾಜಶೇಖರ ಖೇಡಗಿ, ತಾಲೂಕು ಕಾರ್ಯದರ್ಶಿಗಳಾದ ಶ್ರೀ ದತ್ತಾತ್ರೇಯ ಕಠಾರೆ, ಸಹ ಕಾರ್ಯದರ್ಶಿಗಳಾದ ಶ್ರೀಮತಿ ವಿದ್ಯಾವತಿ ಬದಿ, ವಿವಿಧ ಶಲೆಯ ಮಕ್ಕಳು, ಶಿಕ್ಷಕರು, ಮುಖ್ಯೋಪಾಧ್ಯಾಯರು ಉಪಸ್ಥಿತರಿದ್ದರು.

* ಇಂಡಿ ತಾಲ್ಲೂಕಿನ ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯ ಹಾಗೂ ಪ್ರಾದೇಶಿಕ ಅರಣ್ಯ ಇಲಾಖೆ, ಇಂಡಿ ಇವರ ಸಂಯುಕ್ತ ಆಶ್ರಯದಲ್ಲಿ ಸರಕಾರಿ ಪ್ರೌಢಶಾಲೆ ಲಚ್ಯಾಣದಲ್ಲಿ ವಿಶ್ವ ಪರಿಸರ ದಿನ, ವಿಶ್ವ ಯೋಗ ದಿನ 2019-20ನೇ ಸಾಲಿನ ಸ್ಕೌಟ್ಸ್-ಗೈಡ್ಸ್ ವಾರ್ಷಿಕ ಯೋಜನಾ ಪುಸ್ತಕದ ಬಿಡುಗಡೆ ಸಮಾರಂಭವನ್ನು ಆಯೋಜಿಸಲಾಯಿತು. ಈ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಸುರೇಶ್ ವಾಲಿ ವಹಿಸಿದ್ದರು. ಕಾರ್ಯಕ್ರಮದ ಉದ್ಘಾಟನೆಯನ್ನು ಶ್ರೀ ಲಕ್ಷ್ಮಣ ನಾದ ಪ್ರಾದೇಶಿಕ ಉಪ ಅರಣ್ಯಾಧಿಕಾರಿಗಳು ಇಂಡಿ ನೆರವೇರಿಸಿದರು ಮುಖ್ಯ ಅತಿಥಿ ಸ್ಥಾನವನ್ನು ಶ್ರೀ ಡಿ.ಎ. ಮುಜಗೊಂಡ, ಜಗದೀಶ್ ಬಾಬಳಗಾಂವ ವಹಿಸಿದ್ದರು. ಪುಸ್ತಕ ಬಿಡುಗಡೆಯನ್ನು ಶ್ರೀ ಎ.ಬಿ. ಕೌಲಗಿ, ದೈಹಿಕ ಶಿಕ್ಷಣಾಧಿಕಾರಿಗಳು, ಇಂಡಿ ಇವರು ನೆರವೇರಿಸಿದರು.



* ಮೇ 25 ರಿಂದ 31ರ ವರೆಗೆ ಮುದ್ದೇಬಿಹಾಳ ಸ್ಥಳೀಯ ಸಂಸ್ಥೆಯ ಸ್ಕೌಟ್ಸ್ ಮಕ್ಕಳ ಬೇಸಿಗೆ ಶಿಬಿರ ಸರಕಾರಿ ಪ್ರೌಢಶಾಲೆ ತಂಗಡಗಿ ಯಲ್ಲಿ ಜರುಗಿತು. ಶ್ರೀ ಬಿ.ಎಸ್. ಯಳವಾರ, ಮುಖ್ಯೋಪಾಧ್ಯಾಯರು, ಸರಕಾರಿ ಪ್ರೌಢಶಾಲೆ ತಂಗಡಗಿ. ಇವರ ಅಧ್ಯಕ್ಷತೆಯಲ್ಲಿ ಶ್ರೀಮತಿ ಲಕ್ಷ್ಮೀಬಾಯಿ ಮಾದರ, ಸಮಾಜ ಸೇವಕರು. ಇವರು ಶಿಬಿರವನ್ನು ಸಸಿಗೆ ನೀರೆರೆಯುವುದರ ಮೂಲಕ ಉದ್ಘಾಟಿಸಿದರು.

ದಿನಚರಿಯಂತೆ ಕರಾಟೆ, ಯೋಗ, ವ್ಯಕ್ತಿತ್ವ ವಿಕಸನ ವಿಷಯಕ್ಕೆ ಸಂಬಂಧಿಸಿದಂತೆ ಪಾಠ ಪ್ರವಚನ ಪ್ರಾಯೋಗಿಕವಾಗಿ ಶ್ರೀ ದತ್ತಾತ್ರೇಯ ಕಠಾರೆ ಸಂಪನ್ಮೂಲ ವ್ಯಕ್ತಿಗಳು (ಕರಾಟೆ) ಹಾಗೂ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳು ಮುದ್ದೇಬಿಹಾಳ ಇವರು 7 ದಿನಗಳ ವರೆಗೆ ನಡೆಸಿದರು. ಸಹಾಯಕರಾಗಿ ಶ್ರೀ ಗುಂಡುರಾವ ಚವ್ಹಾಣ (ಸ್ಕೌಟ್ ಮಾಸ್ಟರ್) ಶ್ರೀಮತಿ ವಿದ್ಯಾವತಿ ಬದಿ (ಗೈಡ್ ಕ್ಯಾಪ್ಟನ್) ಕಾರ್ಯ ನಿರ್ವಹಿಸಿದರು. ಶಿಬಿರದಲ್ಲಿ ಒಟ್ಟು 49 ಸ್ಕೌಟ್ಸ್‌ಗಳು ಭಾಗವಹಿಸಿದ್ದರು.

ಮುಕ್ತಾಯ ಸಮಾರಂಭಕ್ಕೆ ಸ್ಥಳೀಯ ಶಾಸಕರಾದ ಮಾನ್ಯ ಶ್ರೀ ಎ.ಎಸ್. ಪಾಟೀಲ (ನಡಹಳ್ಳಿ) ಯವರು ಮುಖ್ಯ ಅತಿಥಿಗಳಾಗಿ ಆಗಮಿಸಿ ಸ್ಕೌಟ್ಸ್-ಗೈಡ್ಸ್‌ಗಳನ್ನುದ್ದೇಶಿಸಿ ಶಿಬಿರ ವಾಸದ ಮಹತ್ವ ಮತ್ತ ಪರಿಸರದ ಕಾಳಜಿ, ಯೋಗ ಮತ್ತು ಕರಾಟೆ ಶಿಕ್ಷಣದ ಪ್ರಾಮುಖ್ಯತೆ ಕುರಿತು ಮಾತನಾಡಿದರು. ಈ ಸಂದರ್ಭದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಎಸ್.ಜೆ. ಗಾಂಜಿ, ಸ್ಥಳೀಯ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ವಿ.ಬಿ. ವಡವಡಗಿ, ತಾಲೂಕಾ ದೈಹಿಕ ಶಿಕ್ಷಣಾಧಿಕಾರಿ ಶ್ರೀ ಹೆಚ್.ಎಲ್. ಕರಡ್ಡಿ, ಶ್ರೀ ಬಿ.ಎಸ್. ಯಳವಾರ, ಮುಖ್ಯೋಪಾಧ್ಯಾಯರು, ಸ.ಪ್ರೌಢಶಾಲೆ, ತಂಗಡಗಿಯವರು ಉಪಸ್ಥಿತರಿದ್ದರು.

* ಜುಲೈ 17ರಂದು ಜಿಲ್ಲೆಯ ಪದವಿ ಪೂರ್ವ ಉಪನ್ಯಾಸಕ/ಉಪನ್ಯಾಸಕಿಯರಿಗೆ ಒಂದು ದಿನದ "ಪ್ರಾರಂಭಿಕ ಶಿಬಿರ"ವನ್ನು ಸರ್.ಎಂ. ವಿಶ್ವೇಶ್ವರಯ್ಯ ಸಭಾಭವನ ಸರ್ಕಾರಿ ಪದವಿ ಪೂರ್ವ ಬಾಲಕರ ಕಾಲೇಜು, ವಿಜಯಪುರ, ಇಲ್ಲಿ ನಡೆಸಲಾಯಿತು. ಜಿಲ್ಲಾ ಆಯುಕ್ತರಾದ ಶ್ರೀ ಸಿದ್ದಣ್ಣ ಎಂ. ಸಕ್ರಿ ಯವರ ಅಧ್ಯಕ್ಷತೆಯಲ್ಲಿ ಶಿಬಿರವನ್ನು ಡಿಡಿಪಿಯು. ಶ್ರೀ ಜೆ.ಎಸ್.ಪೂಜೇರಿ ರವರು ಕಾರ್ಯಕ್ರಮ ಉದ್ಘಾಟಿಸಿದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಎಸ್.ಎಸ್. ಬೊಮ್ಮನಹಳ್ಳಿ, ಜಿಲ್ಲಾ ಖಜಾಂಚಿ, ಶ್ರೀ ಸಹಜಾನಂದ ದಂದರಗಿ, ಕಾಲೇಜು ಪ್ರಾಚಾರ್ಯರಾದ ಶ್ರೀ ಬಿ.ಬಿ. ಗಂಗನಳ್ಳಿ ಶ್ರೀ ಎಂ.ಎಸ್. ಮಠಪತಿ, ಶ್ರೀ ಚಂದ್ರಕಾಂತ ವಡ್ಡರ, ಶ್ರೀ ನಾಗೇಶ ಆರ್. ಶಿವಪೂರ, ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಎಸ್.ಬಿ. ಭಜಂತ್ರಿ, ಶ್ರೀ ಜಿ.ವಿ. ರಾಜಶೇಖರ ಖೇಡಗಿ ಮುಂತಾದವರು ಉಪಸ್ಥಿತರಿದ್ದರು.

ಶಿಬಿರವನ್ನು ಉದ್ಘಾಟಿಸಿ ಮಾತನಾಡಿದ ಡಿಡಿಪಿಯು ಶ್ರೀ ಜೆ.ಎಸ್. ಪೂಜೇರಿ ರವರು ರೋವರ್ಸ್ ಮತ್ತು ರೇಂಜರ್ಸ್ ಘಟಕಗಳನ್ನು ಜಿಲ್ಲೆಯಲ್ಲಿ ಎಲ್ಲ ಕಾಲೇಜುಗಳಲ್ಲಿ ಪ್ರಾರಂಭಿಸಿ ಸಮಾಜಕ್ಕೆ ಉತ್ತಮ ನಾಯಕರನ್ನು ಮತ್ತು ಉತ್ತಮ ಪ್ರಜೆಗಳನ್ನು ನೀಡಿ ಎಂದರು.

ಶಿಬಿರದ ನಾಯಕರಾಗಿ ಶ್ರೀ ನಾಗೇಶ ಶಿವಪೂರ ಎ.ಎಸ್.ಒ.ಸಿ. ಕಾರ್ಯ ನಿರ್ವಹಿಸಿದರು. ಶಿಬಿರದಲ್ಲಿ 98 ಶಿಬಿರಾರ್ಥಿಗಳು ಭಾಗವಹಿಸಿದ್ದರು. ಶಿಬಿರ ಮುಕ್ತಾಯ ಸಮಾರಂಭದಲ್ಲಿ ಡಿಡಿಪಿಐ ಶ್ರೀ ಜೆ.ಎಸ್. ಪೂಜೇರಿ ರವರು ಭಾಗಿಯಾಗಿ ಶಿಬಿರಾರ್ಥಿಗಳಿಗೆ ಪ್ರಮಾಣಪತ್ರಗಳನ್ನು ಪ್ರಧಾನ ಮಾಡಿದರು.

## ಯಾದಗಿರಿ

* ಜೂನ್ 21ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಯಾದಗಿರಿಯಲ್ಲಿ ಹಮ್ಮಿಕೊಂಡಿದ್ದ ವಿಶ್ವಯೋಗ ದಿನಾಚರಣೆಯ ಕಾರ್ಯಕ್ರಮದಲ್ಲಿ ಸರಕಾರಿ ಪದವಿ ಪೂರ್ವ ಕಾಲೇಜಿನ ಮೈದಾನದಲ್ಲಿ ಸುಮಾರು 200ಕ್ಕೂ ಹೆಚ್ಚು ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಜಿಲ್ಲಾ ಪದಾಧಿಕಾರಿ ಶ್ರೀ ರಾಘವೇಂದ್ರ ಜಿಲ್ಲಾ ಕಾರ್ಯದರ್ಶಿಗಳು ಹಾಗೂ ಜಿಲ್ಲಾ ಸಂಘಟಕರಾದ ಶ್ರೀಮತಿ ನಾಗರತ್ನ ಪಾಟೀಲ್ ಮತ್ತು ಸ್ಕೌಟ್ ಮಾಸ್ಟರ್ಸ್, ಗೈಡ್ ಕ್ಯಾಪ್ಟನ್ಸ್ ಹಾಗೂ ಸ್ಥಳೀಯ ಕಾರ್ಯದರ್ಶಿ ಶ್ರೀ ಬಸಿರೆಡ್ಡಿ ಪಾಟೀಲ್ ಭಾಗವಹಿಸಿದ್ದರು.

* ಜಿಲ್ಲಾ ಸ್ಕೌಟ್ಸ್-ಗೈಡ್ಸ ಭವನದಲ್ಲಿ ವಿಶ್ವ ಪರಿಸರ ದಿನಾಚರಣೆ ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳಾಗಿ ಶ್ರೀ ಮಲ್ಲಿಕಾರ್ಜುನ್, ವ್ಯವಸ್ಥಾಪಕರು ಮತ್ತು ಶ್ರೀ ರವಿ ಬಳಿಚಕ್ರ, ಶ್ರೀ ಚೇನ್ ಬಸಿರೆಡ್ಡಿ ಅಧೀಕ್ಷಕರು ಹಾಗೂ ಭಾರತ್ ಸ್ಕೌಟ್ಸ್-ಗೈಡ್ಸ್‌ನ ಜಿಲ್ಲಾ ಪದಾಧಿಕಾರಿಗಳು, ಸ್ಕೌಟ್ ಮಾಸ್ಟರ್, ಗೈಡ್ ಕ್ಯಾಪ್ಟನ್ಸ್, ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು ಹಾಗೂ ಉಪನಿರ್ದೇಶಕರ ಕಾರ್ಯಾಲಯದಿಂದ ಮುಖ್ಯ ಅತಿಥಿಯಾಗಿ ಆಗಮಿಸಿದ್ದ ಶ್ರೀ ಮಲ್ಲಿಕಾಜುನ್ ರವರು ಪರಿಸರ ಬಗ್ಗೆ ಕುರಿತು ಮಾತನಾಡಿದರು. ವಿಶ್ವಯೋಗ ದಿನಾಚರಣೆಯ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದ ಎಲ್ಲಾ ಗಣ್ಯ ವ್ಯಕ್ತಿಗಳಿಂದ ಭಾರತ್ ಸ್ಕೌಟ್ಸ್-ಗೈಡ್ಸ್‌ನ ವಾರ್ಷಿಕ ಕಾರ್ಯಕ್ರಮಗಳ ಯೋಜನೆಯ ಪುಸ್ತಕವನ್ನು ಬಿಡುಗಡೆ ಮಾಡಲಾಯಿತು.





## ಜೂನ್ 24ರಂದು ಪತ್ರಿಕೆಯಲ್ಲಿ ಪ್ರಕಟಗೊಂಡ ವರದಿ

ಕೃಪೆ: ವಿಜಯ ಕರ್ನಾಟಕ

ಉಡುಪಿ ಜಿಲ್ಲಾ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳಿಂದ ಪ್ರಧಾನಮಂತ್ರಿ ಶ್ರೀ ನರೇಂದ್ರ ಮೋದಿಯವರ ಮಹತ್ವಾಕಾಂಕ್ಷೆಯ ಸ್ವಚ್ಛ ಭಾರತ್ ಯೋಜನೆಗೂ ಮೊದಲೇ ಕುಕ್ಕಿಕಟ್ಟೆ ಇಂದಿರಾನಗರ, ಪೆರಂಪಳ್ಳಿ ಬಸ್ ನಿಲ್ದಾಣಗಳಲ್ಲಿ ಸ್ವಚ್ಛತೆ ಪ್ರತಿ ಭಾನುವಾರ ನಡೆಯುತ್ತಿತ್ತು.

ಮಾನ್ಯ ಪ್ರಧಾನಿ ಶ್ರೀ ನರೇಂದ್ರ ಮೋದಿಯವರ ಸ್ವಚ್ಛ ಭಾರತ ಯೋಜನೆಯಿಂದ ಪ್ರೇರಣೆ ಪಡೆದ ತಂಡವು 2016ರ ಮೇ 16ರಿಂದ ಪ್ರತಿ ತಿಂಗಳ ಕೊನೆಯ ಭಾನುವಾರ ಸ್ವಚ್ಛತೆಯನ್ನು ಇಂದ್ರಾಳಿ ರೈಲ್ವೆ ನಿಲ್ದಾಣದಲ್ಲಿ ಕೈಗೊಳ್ಳಲು ಬದ್ಧತೆಯೊಂದಿಗೆ ಕಾರ್ಯ ಪ್ರವೃತ್ತವಾಗಿದೆ.

ರೈಲ್ವೆ ಅಧಿಕಾರಿಗಳು ಮಕ್ಕಳ ಪರಿಸರ ಕಾಳಜಿಗೆ ಕೊಡುಗೆಯಾಗಿ ತ್ಯಾಜ್ಯ ಹೆಕ್ಕಿ ಹಾಕಲು ಐದಾರು ಪ್ಲಾಸ್ಟಿಕ್ ಬ್ಯಾಗ್, ಕೈಕವಚ, ಸಮೋಸಾ, ಮಾಲ್ಟ್ ಒದಗಿಸುತ್ತಾರೆ.

ಪ್ರಧಾನಿ ಶ್ರೀ ನರೇಂದ್ರ ಮೋದಿಯವರು ಸ್ಕೌಟ್ಸ್-ಗೈಡ್ಸ್ ಕೇಂದ್ರ ಕಛೇರಿಗೆ ಮೆಚ್ಚುಗೆ ಪತ್ರ ರವಾನಿಸಿದ್ದಾರೆ. ಮನ್ ಕೀ ಬಾತ್‌ನಲ್ಲೂ ಮಕ್ಕಳು ನಡೆಸುವ ಸ್ವಚ್ಛತಾ ಕಾಯಕವನ್ನು ಪ್ರಸ್ತಾಪಿಸಿ ಅನ್ಯರಿಗೂ ಪ್ರೇರಣೆ ನೀಡಿದ್ದಾರೆ. ಅಲೆವೂರಿನ ಪ್ರಗತಿನಗರದಲ್ಲಿ ಮೇ 21 ರಿಂದ 23ರ ತನಕ 10 ಸಾವಿರ ಬೀಜದ ಉಂಡೆಗಳನ್ನು ಅರಣ್ಯ ಇಲಾಖೆ ಸಹಯೋಗದಲ್ಲಿ ತಯಾರಿಸಿ ನೀಡಿದ್ದು 2,000 ಬೀಜದುಂಡೆಗಳನ್ನು ಪ್ರಗತಿ ನಗರದಲ್ಲಿ ನೆಡಲು ಉದ್ದೇಶಿಸಲಾಗಿದೆ.

ರಾಜ್ಯ ಮುಖ್ಯ ಆಯುಕ್ತ ಶ್ರೀ ಪಿ.ಜಿ.ಆರ್. ಸಿಂಧ್ಯಾ ಅವರು ಉಡುಪಿಯ ಮಾದರಿ ಕೆಲಸವನ್ನು ಹೋದಲ್ಲೆಲ್ಲಾ ಅನ್ಯರಿಗೆ ಪ್ರೇರಣೆಗಾಗಿ ಪ್ರಸ್ತಾಪಿಸುತ್ತಿದ್ದಾರೆ. ಉಡುಪಿ ಜಿಲ್ಲೆ ಈ ಬಾರಿ ನೀರಿನ ಸಮಸ್ಯೆ ಎದುರಿಸಿದ ಹಿನ್ನೆಲೆಯಲ್ಲಿ ನೀರಿಂಗಿಸಲು ಹೊಂಡ ರಚಿಸಿ 5 ಸಾವಿರ ಗಿಡ ನೆಡಲು ತಯಾರಿ ನಡೆದಿದೆ.

ರೈಲ್ವೆ ಇಲಾಖೆ ಮುತುವರ್ಜಿ ಹಿನ್ನೆಲೆಯಲ್ಲಿ ಇಂದ್ರಾಳಿ ರೈಲ್ವೆ ನಿಲ್ದಾಣದ ಪರಿಸರದಲ್ಲಿ 100 ಔಷಧೀಯ ಗಿಡಗಳನ್ನು ನೆಡಲು ಅನುಮತಿ ದೊರೆತಿದೆ. ಸಂಸ್ಥೆಯ ಜಿಲ್ಲಾ ಮುಖ್ಯ ಆಯುಕ್ತೆ ಶ್ರೀಮತಿ ಶಾಂತಾ ವಿ. ಆಚಾರ್ಯ, ಜಿಲ್ಲಾ ಸ್ಕೌಟ್ ಆಯುಕ್ತ ಡಾ. ವಿಜಯೇಂದ್ರ ವಸಂತ್, ಜಿಲ್ಲಾ ಗೈಡ್ ಕಮೀಷನರ್ ಶ್ರೀಮತಿ ಜ್ಯೋತಿ ಪೈ. ಅಭಿಯಾನದ ಬೆನ್ನೆಲುಬಾಗಿದ್ದಾರೆ.

## ಜುಲೈ 19ರಂದು ಉದಯವಾಣಿ ಪತ್ರಿಕೆಯಲ್ಲಿ ಪ್ರಕಟಗೊಂಡ ವರದಿ

# ಸ್ಕೌಟ್ಸ್-ಗೈಡ್ಸ್‌ನಿಂದ ಬದಲಾವಣೆ

## ಸೇವಾ ಕಾರ್ಯದಲ್ಲಿ ತೊಡಗಿದ ಬಿಬಿಎಂಪಿ ಶಾಲೆ-ಕಾಲೇಜು ವಿದ್ಯಾರ್ಥಿಗಳು

ಬೆಂಗಳೂರು: ಬಿಬಿಎಂಪಿ ಶಾಲೆಗಳಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿಯಿಂದ ಬಿಬಿಎಂಪಿಯ ಶಾಲಾ ಮಕ್ಕಳ ಮೇಲೆ ಧನಾತ್ಮಕ ಪರಿಣಾಮ ಬೀರಿದೆ.

ಕಳೆದ ವರ್ಷ ಬಿಬಿಎಂಪಿ ಶಾಲೆಗಳಲ್ಲಿನ 3,500 ಮಕ್ಕಳಿಗೆ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ನೀಡಲಾಗಿತ್ತು. ಈ ತರಬೇತಿಯಿಂದ ಶಾಲಾ ಮಕ್ಕಳ ನಡವಳಿಕೆಯಲ್ಲಿ ಬದಲಾವಣೆ ಕಂಡು ಬಂದಿದ್ದು, ಬಿಬಿಎಂಪಿ ಶಾಲಾ ವಾತಾವರಣವೂ ಬದಲಾಗಿದೆ. ಇದರ ಜತೆಗೆ ದುಶ್ಚಟಗಳಿಂದಲೂ ಮಕ್ಕಳು ದೂರ ಉಳಿಯುತ್ತಿದ್ದಾರೆ ಹಾಗೂ ಜವಾಬ್ದಾರಿಯಿಂದ ನಡೆದುಕೊಳ್ಳುತ್ತಿದ್ದಾರೆ ಎನ್ನುತ್ತಾರೆ ಫ್ರೇಜರ್‌ಟೌನ್‌ನ ಪಾಲಿಕೆಯ ಶಾಲೆಯ ಸಹಾಯಕ ಮುಖ್ಯ ಶಿಕ್ಷಕ [illegible]

'ಆಹಾರ ಮತ್ತು [illegible] ಮಕ್ಕಳಲ್ಲಿ [illegible] ಸಮಾಜ ಸೇವಾ ಮನೋಭಾವವೂ ಬದಲಾಗಿದೆ. ತರಬೇತಿ ಪಡೆದ ಮಕ್ಕಳು ಇತರ ಮಕ್ಕಳಿಗೂ ತಿಳಿಸುತ್ತಿದ್ದಾರೆ. ತರಗತಿಯಲ್ಲಿ ಪೇಪರ್ ಹರಿಯುವುದು, ಕಸ ಎಸೆಯುವುದು ಸಂಪೂರ್ಣ ತಪ್ಪಿದೆ. ಶಿಕ್ಷಕರಿಗೆ ಗೌರವ ನೀಡುವುದು ಮತ್ತು ಶಿಕ್ಷಣದ ಕಡೆಗೂ ಹೆಚ್ಚು ಆಸಕ್ತಿ ತೋರಿಸುತ್ತಿದ್ದಾರೆ' ಎಂದು ಅವರು ವಿವರಿಸುತ್ತಾರೆ.

ಬಿಬಿಎಂಪಿಯ ಶಾಲೆಗಳಿಗೆ ಬಡ, ಮಧ್ಯಮ ವರ್ಗದ ಮತ್ತು ಸ್ಲಂಗಳಲ್ಲಿ ನೆಲೆಸಿರುವ ಮಕ್ಕಳು ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾರೆ. ಈ ಮಕ್ಕಳಿಗೆ ಪಾಠದ ಜತೆಗೆ ಪಠ್ಯೇತರ ಚುವಟಿಕೆಗಳಿಗೂ ಉತ್ತೇಜನ ನೀಡುವ ಮತ್ತು ಕೌಶಲ್ಯ ವೃದ್ಧಿಸುವ ಉದ್ದೇಶದಿಂದ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ನೀಡುವುದಕ್ಕೆ ಪಾಲಿಕೆ ಮುಂದಾಗಿದೆ.

ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳಿಗೆ ಯಾವ ರೀತಿ ತರಬೇತಿ ನೀಡಬೇಕು ಎಂಬ ಕುರಿತು ಮೊದಲ ಹಂತದಲ್ಲಿ ದೊಡ್ಡಬಳ್ಳಾಪುರದ 120 ಶಿಕ್ಷಕರಿಗೆ ತರಬೇತಿ ನೀಡಲಾಗಿದೆ. 2019-20ನೇ ಸಾಲಿನ ಬಜೆಟ್‌ನಲ್ಲಿ ಈ ತರಬೇತಿಗೆ ಒಂದು ಕೋಟಿ ರೂ.ಗಳನ್ನು ಪಾಲಿಕೆ ಮೀಸಲಿರಿಸಿತ್ತು. ಕಳೆದ ವರ್ಷ ಪಾಲಿಕೆ ಶಾಲೆಗಳ ಮಕ್ಕಳ ನಡವಳಿಕೆಯಲ್ಲಿ ಬದಲಾವಣೆ ಕಂಡು ಬಂದಿರುವುದರಿಂದ, ಈ ವರ್ಷದಿಂದ ಬಿಬಿಎಂಪಿ ಶಾಲೆಗಳಲ್ಲಿ ದಾಖಲಾಗಿರುವ ಎಲ್ಲ ಮಕ್ಕಳಿಗೂ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ನೀಡಲಾಗುತ್ತಿದೆ.



"ಮಕ್ಕಳಿಗೆ ಸ್ಕೌಟ್ಸ್ ಮತ್ತು ಗೈಡ್ಸ್‌ನಲ್ಲಿ ತರಬೇತಿ ನೀಡುವುದರಿಂದ ಸಮಾಜ ಸೇವಾ ಅನುಭವ ಮತ್ತು ಕೌಶಲ್ಯಾಭಿವೃದ್ಧಿ ಆಗುತ್ತದೆ. ಮಕ್ಕಳು ಆತ್ಮಸ್ಥೈರ್ಯವಂತರಾಗುತ್ತಾರೆ.

- ಎಂ.ವಿ.ಚಿಲ್ಲಯ್ಯ, ಸ್ಕೌಟ್ಸ್ ಮತ್ತು ಗೈಡ್ಸ್ ನೋಡಲ್ ಅಧಿಕಾರಿ

ಈ ಬಾರಿ ಜೂ.25ರವರೆಗೆ ಪಾಲಿಕೆ ಶಾಲೆಗಳಲ್ಲಿ 15,807 ಮಕ್ಕಳು ದಾಖಲಾಗಿದ್ದಾರೆ. ಆಗಸ್ಟ್‌ವರೆಗೆ ದಾಖಲಾತಿ ಮುಂದುವರಿಯಲಿದ್ದು, ಮತ್ತಷ್ಟು ಮಕ್ಕಳು ದಾಖಲಾಗುವ ಸಾಧ್ಯತೆ ಇದೆ. ಎಲ್ಲ ಮಕ್ಕಳಿಗೂ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ನೀಡಲು ಬಿಬಿಎಂಪಿ ತೀರ್ಮಾನಿಸಿದೆ.

**ದುಶ್ಚಟಗಳಿಂದ ದೂರ ಉಳಿಯಲು ಅನುವು:** ಸ್ಲಂ ಮಕ್ಕಳು ಸಾಮಾನ್ಯವಾಗಿ ಉಳಿದ ಮಕ್ಕಳಿಗಿಂತ ಬೇಗ ದುಶ್ಚಟಗಳಿಗೆ ಬಲಿಯಾಗುತ್ತಾರೆ ಎಂಬ ಆರೋಪವಿದೆ. ಇದಕ್ಕೆ ಅಲ್ಲಿನ ವಾತಾವರಣವೂ ಕಾರಣ. ಮಕ್ಕಳನ್ನು ದುಶ್ಚಟಗಳಿಂದ ತಪ್ಪಿಸುವಲ್ಲೂ ಸ್ಕೌಟ್ಸ್ ಮತ್ತು ಗೈಡ್ಸ್ ನೆರವಾಗಿದೆ. ಘಟಕದಲ್ಲಿ ನೀಡುವ ತರಬೇತಿ ಗುಟ್ಕಾ, ತಂಬಾಕು ಮತ್ತು ಗಾಂಜಾ ಸೇವನೆಯಿಂದ ಮಕ್ಕಳನ್ನು ದೂರ ಉಳಿಸಿದೆ. ಇದು ಶಾಲಾ ಶಿಕ್ಷಕರಲ್ಲೂ ಆಶಾಭಾವನೆ ಮೂಡಿಸಿದೆ. ಮಕ್ಕಳು ದುಶ್ಚಟಗಳಿಂದ ದೂರವಾಗುವ ಜತೆಗೆ ಇತರರಿಗೂ ತಿಳಿವಳಿಕೆ ನೀಡುತ್ತಿದ್ದಾರೆ. ಮಕ್ಕಳೇ ಈ ಬಗ್ಗೆ ತಮ್ಮ ಅನುಭವ ಹಂಚಿಕೊಂಡಿದ್ದಾರೆ ಎನ್ನುತ್ತಾರೆ ಬಿಬಿಎಂಪಿ ಶಾಲೆಯ ಶಿಕ್ಷಕರು.

ಸ್ಕೌಟ್ಸ್ ಮತ್ತು ಗೈಡ್ಸ್‌ನಲ್ಲಿ ಮಾರ್ಚ್ ಫಾಸ್ಟ್, ಸಮಾಜ ಸೇವೆ, ಸ್ವಚ್ಛತೆ, ಶಿಕ್ಷಣ, ಆರೋಗ್ಯ, ಮನೆಕೆಲಸ, ಶಿಸ್ತು, ನಡವಳಿಕೆ ಮತ್ತು ಕೌಶಲ್ಯಾಭಿವೃದ್ಧಿಗೆ ಉತ್ತೇಜನ ನೀಡಲಾಗುತ್ತಿದೆ

### ಮಕ್ಕಳಿಗೆ ತರಗತಿಯನುಸಾರ ನೀಡುವ ತರಬೇತಿ

| ತರಗತಿ | ಗಂಡು | ಹೆಣ್ಣು |
|---|---|---|
| ನರ್ಸರಿ-5ನೇ ತರಗತಿ | ಕಬ್ಸ್ | ಬುಲ್‌ಬುಲ್ಸ್ |
| 6-10ನೇ ತರಗತಿ | ಸ್ಕೌಟ್ಸ್ | ಗೈಡ್ಸ್ |
| ಕಾಲೇಜು | ರೋವರ್ಸ್ | ರೇಂಜರ್ಸ್ |

### ಪಾಲಿಕೆ ಶಾಲೆ-ಕಾಲೇಜು ವಿದ್ಯಾರ್ಥಿಗಳ ಸಂಖ್ಯೆ

| ವಿಭಾಗ | ಸಂಖ್ಯೆ | ಹೆಣ್ಣು | ಗಂಡು | ಒಟ್ಟು |
|---|---|---|---|---|
| ಶಿಶುವಿಹಾರ | 91 | 1854 | 1937 | 3791 |
| ಪ್ರಾಥಮಿಕ ಶಾಲೆ | 15 | 925 | 933 | 1858 |
| ಪ್ರೌಢಶಾಲೆ | 12 | 3515 | 1730 | 5245 |
| ಪಿಯು ಕಾಲೇಜು | 15 | 1045 | 755 | 1800 |
| ಪದವಿ ಕಾಲೇಜು | 04 | 1021 | 92 | 1113 |
| ಒಟ್ಟು | 151 | 10360 | 5447 | 15807 |

# ಗಂಟಲು ನೋವು

– ಡಾ. ವಸುಂಧರಾ ಭೂಪತಿ
ಅಧ್ಯಕ್ಷರು, ಕನ್ನಡ ಪುಸ್ತಕ ಪ್ರಾಧಿಕಾರ

"ನಾಳೆ ಗಾಯನ ಸ್ಪರ್ಧೆ ಇದೆ. ಗಂಟಲು ಕಿರಿಕಿರಿ ಮಾಡ್ತಿದೆ. ಬೇಗ ಏನಾದ್ರು ಮಾಡಮ್ಮಾ" ಮಗನ ಅಳಲು, ತಾಯಿಯನ್ನು ಯೋಚನೆಗೀಡು ಮಾಡುತ್ತದೆ. ಶೀತದ ವಾತಾವರಣದಲ್ಲಿ ತಿರುಗಾಡುವುದರಿಂದ, ಜ್ವರ ಇರುವಾಗ, ಕರಿದ ಪದಾರ್ಥಗಳ ಅಧಿಕ ಸೇವನೆಯಿಂದ, ಹೆಚ್ಚು ಹೊತ್ತು ಗಟ್ಟಿಯಾದ ಧ್ವನಿಯಲ್ಲಿ ಮಾತನಾಡುವುದರಿಂದ, ಫ್ರಿಜ್ ನೀರನ್ನು ಕುಡಿಯುವುದರಿಂದ, ಧೂಳು, ಹೊಗೆ ಮುಂತಾದ ಅಲರ್ಜಿ ಕಾರಕಗಳಿಂದ ಗಂಟಲು ನೋವು ಕಾಣಿಸಿಕೊಳ್ಳುತ್ತದೆ. ಗಂಟಲು ನೋವಿರುವಾಗ ತಲೆಭಾರ, ಉಗುಳು ನುಂಗುವುದಕ್ಕೆ ಕಷ್ಟವಾಗುವುದು, ಗಂಟಲಿನ ಭಾಗದಲ್ಲಿ ನೋವು, ಬಿಗಿತ, ನೀರು ಕುಡಿಯುವಾಗ ಮತ್ತು ಯಾವುದೇ ಆಹಾರ ಪದಾರ್ಥ ಸೇವಿಸುವಾಗ ತೊಂದರೆ ಉಂಟಾಗುತ್ತದೆ. ಗಂಟಲು ನೋವು ಸೋಂಕಿನಿಂದಲೂ ಕಾಣಿಸಿಕೊಳ್ಳುತ್ತದೆ.

**ಉಪ್ಪು ನೀರಿನಿಂದ ಬಾಯಿ ಮುಕ್ಕಳಿಸುವುದು:** ಬಿಸಿ ನೀರಿಗೆ ಚಿಟಿಕೆ ಉಪ್ಪು ಬೆರೆಸಿ ಬಾಯಿಯಲ್ಲಿ ಹಾಕಿಕೊಂಡು ಸ್ವಲ್ಪ ಹೊತ್ತು ಹಾಗೆಯೇ ಇರಿಸಿ ನಂತರ ಬಾಯಿ ಮುಕ್ಕಳಿಸಬೇಕು. ಇದರಿಂದ ಗಂಟಲಿಗೆ ಆರಾಮವೆನಿಸುತ್ತದೆ.

**ಬಿಸಿನೀರು:** ಬಿಸಿನೀರು ಕುಡಿಯಬೇಕು

**ನಿಂಬೆರಸ ಸೇವನೆ :** ಒಂದು ಲೋಟ ಬೆಚ್ಚಗಿನ ನೀರಿಗೆ ಅರ್ಧ ನಿಂಬೆಹಣ್ಣಿನ ರಸ ಬೆರೆಸಿ ಕುಡಿಯಬೇಕು.

**ಗಿಡಮೂಲಿಕೆಗಳ ಚಹಾ:** ಗಂಟಲು ನೋವಿರುವಾಗ ಮಜ್ಜಿಗೆ ಹುಲ್ಲು, ತುಳಸಿ ಮುಂತಾದ ಗಿಡಮೂಲಿಕೆಗಳಿಂದ ತಯಾರಿಸಿದ ಚಹಾ ಸೇವನೆ ಹಿತಕರ.

**ದ್ರವಾಹಾರ:** ತಿಳಿಸಾರು (ರಸಂ), ಶುಂಠಿಯ ಕಷಾಯ, ಜೇಷ್ಠಮಧುವಿನ ಸೂಪ್, ತರಕಾರಿ ಸೂಪ್, ಟೊಮೆಟೋ ಸೂಪ್ ಮುಂತಾದವುಗಳನ್ನು ಆಗಾಗ ಕುಡಿಯುತ್ತಿರಬೇಕು.

**ಬೆಳ್ಳುಳ್ಳಿ ಸೇವನೆ:** ಇಡೀ ಬೆಳ್ಳುಳ್ಳಿಯನ್ನು ಕಾವಲಿ (ಹೆಂಚಿನ) ಮೇಲೆ ಸುಟ್ಟು ನಂತರ ಸಿಪ್ಪೆ ಸುಲಿದು ತಿನ್ನಬೇಕು. ಆಹಾರ ಪದಾರ್ಥ ತಯಾರಿಸುವಾಗ ಬೆಳ್ಳುಳ್ಳಿ ಹೆಚ್ಚಾಗಿ ಬಳಸಬೇಕು.

**ಮನೆ ಮದ್ದು:**

* ತುಳಸಿ ಎಲೆ ಮತ್ತು ದೊಡ್ಡಪತ್ರೆ ಎಲೆಗಳನ್ನು ಸ್ವಲ್ಪ ಜಜ್ಜಿ ಅರ್ಧ ಲೀಟರ್ ನೀರಿನಲ್ಲಿ ಕುದಿಸಿ ಅರ್ಧಕ್ಕಿಳಿದ ನಂತರ ಅದಕ್ಕೆ ಸ್ವಲ್ಪ ಉಪ್ಪು ಬೆರೆಸಿ ದಿನಕ್ಕೆ ಮೂರು ಬಾರಿ ಊಟಕ್ಕೆ ಮುಂಚೆ ಕುಡಿಯಬೇಕು.
* ನಾಲ್ಕು ಚಮಚೆ ಗರುಗದ ಸೊಪ್ಪಿನ ರಸಕ್ಕೆ ನಾಲ್ಕು ಚಮಚೆ ಜೇನುತುಪ್ಪ ಬೆರೆಸಿ ಎರಡು ಭಾಗ ಮಾಡಿ ಬೆಳಿಗ್ಗೆ ಹಾಗೂ ರಾತ್ರಿ ಸೇವಿಸಬೇಕು.
* ಬೆಳ್ಳುಳ್ಳಿ ಎಸಳುಗಳು, ಕಾಳು ಮೆಣಸು, ದುಂಡುಮಲ್ಲಿಗೆ ಎಲೆಗಳನ್ನು ಸೇರಿಸಿ ನುಣ್ಣಗೆ ಅರೆದು ಮಾತ್ರೆ ತಯಾರಿಸಿಟ್ಟುಕೊಂಡು ದಿನಕ್ಕೆ ಮೂರು ಬಾರಿ ಒಂದೊಂದು ಮಾತ್ರೆ ಸೇವಿಸಬೇಕು.
* ಶುಂಠಿ, ಮೆಣಸು, ಹಿಪ್ಪಲಿ ಪುಡಿ ಮಾಡಿಟ್ಟುಕೊಂಡು ಅರ್ಧ ಚಮಚೆಯಷ್ಟು ದಿನಕ್ಕೆರಡು ಬಾರಿ ಜೇನುತುಪ್ಪದೊಂದಿಗೆ ಸೇವಿಸಬೇಕು.
* ಕಾಳು ಮೆಣಸು ಮತ್ತು ಚಿಟಿಕೆ ಉಪ್ಪನ್ನು ಜಜ್ಜಿ ಬಾಯಿಗೆ ಹಾಕಿಕೊಂಡು ಚಪ್ಪರಿಸುವುದರಿಂದ ನೋವು ಬೇಗನೇ ತಗ್ಗುತ್ತದೆ.
* ಒಂದೆಲಗ, ಬಜೆ, ಶುಂಠಿ, ಹಿಪ್ಪಲಿ ಸಮಭಾಗ ಕುಟ್ಟಿ ಪುಡಿ ಮಾಡಿಟ್ಟುಕೊಂಡು ದಿನಕ್ಕೆರಡು ಬಾರಿ ಸೇವಿಸಬೇಕು.
* ದ್ರಾಕ್ಷಿ, ಹಿಪ್ಪಲಿ, ಆಡುಸೋಗೆಗಳನ್ನು ಕುಟ್ಟಿ ಪುಡಿ ಮಾಡಿ ಒಂದು ಲೀಟರ್ ನೀರಿಗೆ 5 ಗ್ರಾಂ ಪುಡಿ ಹಾಕಿ ಒಲೆಯ ಮೇಲಿಟ್ಟು ಕುದಿಸಿ, 1/8ರಷ್ಟು ಉಳಿದಾಗ ಇಳಿಸಿ ಬೆಳಿಗ್ಗೆ ಹಾಗೂ ರಾತ್ರಿ ಜೇನುತುಪ್ಪ ಬೆರೆಸಿ ಕುಡಿಯಬೇಕು.
* ಬಿಸಿಹಾಲಿನೊಂದಿಗೆ ಶುದ್ಧವಾದ ಅರಿಶಿನ ಬೆರೆಸಿ ಕುಡಿಯಬೇಕು.






# ವಸ್ತು ಪ್ರತಿವಸ್ತು

– ಜಿ.ಎಸ್. ನರಸಿಂಹಮೂರ್ತಿ
ಕಾರ್ಯದರ್ಶಿ, ಕನ್ನಡ ಗಣಕಪರಿಷತ್, ಬೆಂಗಳೂರು

ಸಾಮಾನ್ಯವಾಗಿ ನಾವು ನೋಡುವ ವಸ್ತುಗಳನ್ನು ಅದರ ಮೂಲರೂಪದಲ್ಲಿ ನೋಡಬೇಕೆಂದರೆ ಅಣು ಪರಮಾಣುಗಳ ಸ್ಥಿತಿಗೆ ನಾವು ಹೋಗಬೇಕಾಗುತ್ತದೆ. ಅಲ್ಲಿ ಹೋಗಿ ನೋಡಿದಾಗ ನಮಗೆ ಅನೇಕ ಹೊಸ ಸಂಗತಿಗಳು ತಿಳಿದು ಬರುತ್ತವೆ. ಈ ಕಣಗಳ ಲೋಕವೇ ಒಂದು ಹೊಸ ಲೋಕ. ಮುಖ್ಯವಾಗಿ ಅವನ್ನು ಪ್ರೋಟಾನ್, ಎಲೆಕ್ಟ್ರಾನ್ ಮತ್ತು ನ್ಯೂಟ್ರಾನ್‌ಗಳೆಂದು ಗುರುತಿಸಬಹುದು. ಇವೆಲ್ಲವೂ ಪರಮಾಣುವಿನ ಬೀಜಕೇಂದ್ರ(ಓಡಹಿಟಜಣಾ)ದಲ್ಲಿ ಇರುತ್ತವೆ. ಇವಲ್ಲದೆ ಇನ್ನೂ ಹಲವಾರು ಬಗೆಯ ಕಣಗಳು ಪ್ರತಿ ವಸ್ತುವಿನ ಪರಮಾಣುವಿನಲ್ಲಿ ಇರುವುದುಂಟು. ಅವನ್ನು ಸದ್ಯಕ್ಕೆ ಬಿಡೋಣ. ಹೀಗೆ ಈ ವಸ್ತುಗಳಿಂದಾದ ಈ ಪೃಥ್ವಿ ಅಥವಾ ಈ ಜಗತ್ತು ಇಡೀ ವಿಶ್ವ ಎಲ್ಲವೂ ಈ ರೀತಿಯೆ ಇದ್ದರೆ ಏನೂ ತೊಂದರೆಯಿಲ್ಲ. ಆದರೆ ಇದಕ್ಕೆ ಎಲ್ಲವುದಕ್ಕೂ ಒಂದು ಪ್ರತಿ ಎನ್ನುವುದು ಇರುತ್ತದೆ. ಬಿಂಬಕ್ಕೆ ಪ್ರತಿಬಿಂಬ ಇರುವ ಹಾಗೆ ವಸ್ತುವಿಗೆ ಪ್ರತಿವಸ್ತು ಹೊಂದಿದೆಯೋ ಎಂಬುದು ಕೆಲವು ವಿಜ್ಞಾನಿಗಳ ಚಿಂತನೆಯ ವಿಷಯವಾಗಿತ್ತು. 1928ರಲ್ಲಿ ಪಾಲ್ ಡಿರಾಕ್ ಎನ್ನುವ ವಿಜ್ಞಾನಿ ಮೊಟ್ಟ ಮೊದಲಿಗೆ ವಸ್ತವಿನ ಪ್ರತಿ ಕಣಕ್ಕೂ ಒಂದು ಪ್ರತಿಕಣ ಇರುತ್ತದೆ ಎಂದು ಒಂದು ಪ್ರಮೇಯವನ್ನು ಮಂಡಿಸಿದ. ಉದಾಹರಣೆಗೆ ಎಲೆಕ್ಟ್ರಾನ್ ಗೆ ಪ್ರತಿ ಎಲೆಕ್ಟ್ರಾನ್. ಅದನ್ನು ಪಾಸಿಟ್ರಾನ್ ಎಂದು ಕರೆಯುತ್ತಾರೆ. ಪ್ರೋಟಾನ್‌ನ ಪ್ರತಿಕಣವನ್ನು ಪ್ರತಿ ಪ್ರೋಟಾನ್ ಎಂದು ಕರೆಯುತ್ತಾರೆ ನ್ಯೂಟ್ರಾನ್‌ನ ಪ್ರತಿಕಣವನ್ನು ಪ್ರತಿ ಪ್ರೋಟಾನ್ ಎಂದು ಕರೆಯುತ್ತಾರೆ. ವಿಶೇಷವೆಂದರೆ ಎಲೆಕ್ಟ್ರಾನ್ ನಲ್ಲಿ ಋಣಾತ್ಮಕ ವಿದ್ಯುತ್ ಶಕ್ತಿ ಇದ್ದರೆ ಪಾಸಿಟ್ರಾನ್‌ನಲ್ಲಿ ಧನಾತ್ಮಕ ವಿದ್ಯುತ್ ಇರುತ್ತದೆ. ಅಥವಾ ಹೀಗೂ ಹೇಳಬಹುದು. ಎಲೆಕ್ಟ್ರಾನ್ ಎಂಬುದು ಋಣ ವಿದ್ಯುತ್ತನ್ನು ಪ್ರತಿನಿಧಿಸುತ್ತಿದ್ದರೆ ಪಾಸಿಟ್ರಾನ್ ಎಂಬುದು ಧನವಿದ್ಯುತ್ತನ್ನು ಪ್ರತಿನಿಧಿಸುತ್ತದೆ. ಎಂದರೆ ಧನವಿದ್ಯುತ್ ಕಣವಾಗಿ ಅದು ವರ್ತಿಸುತ್ತದೆ. ಅವೆರಡೂ ಅಕಸ್ಮಾತ್ ಸಂಪರ್ಕಕ್ಕೆ ಬಂದರೆ ಆ ಕೂಡಲೇ ಆ ಅವೆರಡೂ ಒಂದಕ್ಕೊಂದು ಘರ್ಷಿಸಿ ಎರಡೂ ನಾಶವಾಗಿ ಶಕ್ತಿ ಹೊರಹೊಮ್ಮುತ್ತದೆ.

ಹೀಗೆ ವಿಸ್ಮಯ ಉಂಟುಮಾಡುವ ಈ ಪ್ರತಿವಸ್ತು ಹೊಸಬಗೆಯ ಕುತೂಹಲವನ್ನೂ ಮೂಡಿಸಿದೆ ಇದನ್ನು ಕಂಡುಹಿಡಿದ ಪಾಲ್ ಡಿರಾಕ್ ಗೆ 1933ರಲ್ಲಿ ನೊಬೆಲ್ ಪ್ರಶಸ್ತಿ ಬಂದಿತ್ತು. ಕಾರ್ಲ್ ಡಿ ಆಂಡರ್ಸನ್ ಎಂಬಾತ ಪಾಲ್ ಡಿರಾಕ್‌ನ ಪ್ರಮೇಯವನ್ನು ಸಾಧಿಸಿದ ಎಂದರೆ ಪಾಸಿಟ್ರಾನ್‌ಗಳನ್ನು ಕಂಡುಹಿಡಿದ. ಇದಕ್ಕಾಗಿ ಅವನಿಗೂ 1936ರಲ್ಲಿ ನೊಬೆಲ್ ಪ್ರಶಸ್ತಿ ದೊರೆಯಿತು.

ಒಂದು ವಾದದ ಪ್ರಕಾರ ವಿಶ್ವದ ಉಗಮ ಒಂದು ಮಹಾಸ್ಫೋಟದಿಂದ ಉಂಟಾದಾಗ ವಸ್ತು ಮತ್ತು ಪ್ರತಿವಸ್ತುಗಳೆರಡೂ ಒಂದೇ ಪ್ರಮಾಣದಲ್ಲಿ ಉತ್ಪನ್ನವಾದವು. ಆದರೆ ಕ್ರಮೇಣ ಪ್ರತಿವಸ್ತುವಿನ ಪ್ರಮಾಣ ಕಡಿಮೆಯಾಗಿ ಇಲ್ಲವೇ ಇಲ್ಲವೆನ್ನುವಷ್ಟು ಕ್ಷೀಣಿಸಿದೆ. ಇದಕ್ಕೆ ಕಾರಣ ಇನ್ನೂ ತಿಳಿದಿಲ್ಲ.

ಡಿರಾಕ್‌ನ ಮೊದಲ ಚಿಂತನೆಯಿಂದ ಕೆಲವು ಕಲ್ಪನೆಗಳು ಹೊಮ್ಮಬಹುದು. ಏನೆಂದರೆ ಈ ರೀತಿಯ ಪ್ರತಿ ವಸ್ತುಗಳಿಂದ ರೂಪಿತವಾದಂಥವು ಬೇರೆ ವಿಶ್ವವೇ ಒಂದಿದೆಯೇ? ಅಕಸ್ಮಾತ್ ಆ ವಿಶ್ವ ನಮ್ಮ ವಿಶ್ವದ ಸಂಪರ್ಕಕ್ಕೆ ಬಂದರೆ ಎರಡು ವಿಶ್ವಗಳು ನಾಶವಾಗಿ ಹೋಗುತ್ತವೆಯೇ ಎಂಬುದು ಒಂದು ಸಂದೇಹ.

ಆಗಲೇ ತಿಳಿಸಿದ ಹಾಗೆ ಒಂದೋ ಕಣವೋ ತನ್ನ ಪ್ರತಿಕಣವನ್ನು ಸ್ಪರ್ಶಿಸಿದಾಗ ಅಥವಾ ಸಂಪರ್ಕಕ್ಕೆ ಬಂದಾಗ ಶಕ್ತಿ ಬಿಡುಗಡೆಯಾಗುತ್ತದೆ ಎಂಬುದು ಎಲ್ಲರಿಗೂ ಈಗ ಗೊತ್ತಿದೆ. ಅನೇಕರು ಇದರಿಂದ ಉತ್ತೇಜಿತರಾಗಿ ಅವಿರತವಾಗಿ ಶಕ್ತಿಯನ್ನು ಉತ್ಪಾದಿಸುವ ಮೂಲವಾಗಿ ಈ ಕಣಗಳು ಮತ್ತೆ ಪ್ರತಿಕಣಗಳ ಸಂಯೋಜನೆಯನ್ನು ನಿಯಂತ್ರಣದಲ್ಲಿಟ್ಟು ಮಾಡಿದರೆ ಹೇಗೆ ಎಂಬ ಕಲ್ಪನೆಯಲ್ಲಿ ತೊಡಗಿಕೊಂಡರು. ಅವರ ಮುಖ್ಯ ಉದ್ದೇಶವೆಂದರೆ ಈ ತರಹದ ಶಕ್ತಿಯಿಂದ ನಾವು ಅಂತರಿಕ್ಷ ಸಂಪರ್ಕಕ್ಕಾಗಿ ಬಳಸುವ ವಾಹನಗಳನ್ನು ಹಾರಿಸುವುದು ಮತ್ತೆ ಅಲ್ಲಿ ಅವುಗಳನ್ನು ನಿರ್ವಹಿಸುವುದು ಬಹಳ ಸುಲಭವಾಗುತ್ತದೆ ಅಲ್ಲವೇ ಎಂದು ಅವರ ಯೋಚನೆಯಾಗಿತ್ತು

ಈ ಪ್ರತಿಕಣಗಳ ಶೋಧದ ಬಗ್ಗೆ ಪ್ರಯೋಗಗಳು ನಡೆಯುತ್ತಲೇ ಇದ್ದವು. ಇತ್ತೀಚೆಗೆ ಯೂರೋಪ್ ನ ನ್ಯೂಕ್ಲಿಯರ್ ಸಂಶೋಧನಾ ಸಂಸ್ಥೆ-ಸಿಇಆರ್‌ಎನ್-ಯಲ್ಲಿ ಲಾರ್ಜ್ ಹ್ಯಾಡ್ರಾನ್ ಕೊಲೈಡರ್ ಎಂಬ ಸಾಧನದ ಸಹಾಯದಿಂದ ಈತ ಈ ತರಹ ಪ್ರತಿ ಕಣಗಳನ್ನು ಸೃಜಿಸಲಾಯಿತು ಮತ್ತು ಅವುಗಳ ಅಧ್ಯಯನ ಮಾಡಲಾಯಿತು. ಹೀಗಾಗಿ ಪ್ರತಿವಸ್ತುಗಳು ವಾಸ್ತವವೇ. ಅವನ್ನು ತಯಾರಿಸಲು ಅಪಾರ ವೇಗದಲ್ಲಿ ಕೆಲವು ಕಣಗಳನ್ನು ಘಟ್ಟಿಯಾದ ವಸ್ತುವೊಂದಕ್ಕೆ ಘಟ್ಟಿಸಬೇಕು. ಅದಕ್ಕೆ ಅಪಾರವಾದ ಹಣ, ಶಕ್ತಿ ಬೇಕಾಗುತ್ತದೆ.




ಪ್ರತಿಕಣಗಳು ಪಾಲ್ ಡಿರಾಕ್ ಮತ್ತು ಇತರರು ಊಹಿಸಿದಂತೆಯೇ ಎಲ್ಲ ರೀತಿಯಲ್ಲೂ ನಡುವಳಿಕೆಯನ್ನು ತೋರಿದ್ದೂ ವ್ಯಕ್ತವಾಯಿತು. ಇದರಿಂದ ಇತರೆ ಕಲ್ಪನೆಗಳು ಗರಿಗೆದರಲು ಅವಕಾಶವಾಯಿತು. ಉದಾಹರಣೆಗೆ ಸುಲಭವಾಗಬಹುದಾದ ಅಂತರಿಕ್ಷ ವಾಹನಗಳ ಉಡ್ಡಯನ ಅಂತರಿಕ್ಷ ತಾಣಗಳ ನಿರ್ವಹಣೆ ಮುಂತಾದವು. ಆದರೆ ನಾಸಾ ಒಂದು ಎಚ್ಚರಿಕೆಯನ್ನು ಕೊಟ್ಟಿತ್ತು. ಒಂದು ಮಿಲಿಗ್ರಾಂ ಪ್ರತಿ ವಸ್ತುವನ್ನು ನಾವು ಸೃಷ್ಟಿಸಲು ನೂರು ಬಿಲಿಯನ್ ಡಾಲರ್‌ಗಳಷ್ಟು ಹಣ ಖರ್ಚಾಗುತ್ತದೆ! ಆದರೂ ಇದು ಸಾಧ್ಯವಾಗಲು ಬಹುಶಃ ಇನ್ನೂ 40-60 ವರ್ಷಗಳಾಗಬಹುದು ಎಂದು ನಾಸಾ ಅಂದಾಜಿಸಿ ಉಪಗ್ರಹಗಳ ಉಡ್ಡಯನಕ್ಕೆ ಒಂದು ಹೊಸ ದಾರಿಯನ್ನು ಸೂಚಿಸಿದೆ. ಅದಲ್ಲದೆಯೂ ಪರಿಸರಕ್ಕೆ ಹಾನಿಯಾಗದಂತೆ ಶಕ್ತಿಯನ್ನು ಉತ್ಪಾದಿಸಲು ಸಾಧ್ಯವಾಗಬಹುದೋ ಕಾದು ನೋಡೋಣ.

# ಜಂಕ್ ಫುಡ್ ಅಂದರೆ ಏನು?

ಡಾ॥ ವಿಜಯಲಕ್ಷ್ಮೀ ಬಾಳೇಕುಂದ್ರಿ

ಆಂಗ್ಲ ಭಾಷೆಯಲ್ಲಿ "ಜಂಕ್ ಫುಡ್" ಅಂದರೆ ಪ್ರಯೋಜನಕ್ಕೆ ಬಾರದ ನಿಷ್ಪ್ರಯೋಜಕ ಆಹಾರ. ಅಂದರೆ ಯಾವುವು ಕೇವಲ ಬಾಯಿಗೆ ರುಚಿಯಾಗಿದ್ದು ಶರೀರಕ್ಕೆ ಹಾನಿಕಾರಕವಾಗಿರುತ್ತವೆಯೋ, ಯಾವುದರಲ್ಲಿ ಕೇವಲ ಕ್ಯಾಲರಿ ಇದ್ದು ಯಾವುದೇ **Macro or Micro Nutricient** ಇಲ್ಲದೇ ಇರುವುದೋ ಅದನ್ನು ಜಂಕ್ ಫುಡ್ ಎನ್ನುತ್ತೇವೆ. ಮೂರು ಬಿಳೀ ವಿಷಗಳಾದ ಸಕ್ಕರೆ, ಉಪ್ಪು ಮತ್ತು ಮೈದಾ ಇರುವ ಜಂಕ್ ಅಂದರೆ ಬೇಡವಾದ ವಸ್ತು ! ಹಾಗಾದರೆ ಇದರ ಆಸೆ ಮಕ್ಕಳಿಗೆ ಯುವಕರಿಗೆ ಯಾಕೆ? ಕಾರಣ ಇದರಲ್ಲಿ **Taste Enhancer** ಅನ್ನುವ ವಿಷಕಾರಿ ರಸಾಯನ ಸೇರಿಸಿದ್ದರಿಂದ ನಾಲಿಗೆಗೆ ಬಲು ರುಚಿಯಾಗಿರುತ್ತದೆ. ಅದರಲ್ಲಿ ಸಕ್ಕರೆ, ಉಪ್ಪು, ಕೆಟ್ಟ ಜಿಡ್ಡು ಹೆಚ್ಚಾಗಿರುವುದರಿಂದ ತಿಂದವರಿಗೆ ತಕ್ಷಣ ಖುಷಿಯಾಗುತ್ತದೆ. ತೃಪ್ತಿ ಆದಂತೆ ಅನ್ನಿಸಿದರೂ ಶರೀರಕ್ಕೆ ಹಾನಿಕಾರಕ ಅನ್ನುವುದು ತಿನ್ನುವವರಿಗೆ ತಿಳಿಯುವುದೇ ಇಲ್ಲ. ಈ ಜಂಕ್‌ಫುಡ್ ತಿನ್ನುವುದರಿಂದ ಮನಸ್ಸು ಶರೀರ ಎರಡೂ ರೋಗಗ್ರಸ್ತವಾಗುವುದೆಂದು ವಿಜ್ಞಾನದ ಸಂಶೋಧನೆ ಸಾರಿಸಾರಿ ಹೇಳುತ್ತಿವೆ. ಆದರೆ, ಮಾಧ್ಯಮಗಳ ಜಾಹಿರಾತು ನೋಡಿದ ಅಮಾಯಕ ಮಕ್ಕಳು ಜಂಕ್‌ಫುಡ್‌ಗೆ ಬಲಿಯಾಗುತ್ತಿದ್ದಾರೆ. ಜಂಕ್‌ಫುಡ್ ತಿಂದು ಮಕ್ಕಳಲ್ಲಿ, ಯುವಕರಲ್ಲಿ ಸ್ಥೂಲಕಾಯ ದಿನೇ-ದಿನೇ ಹೆಚ್ಚುತ್ತಿದೆ. ಅದರಿಂದ ಉಂಟಾಗುವ ಅತೀ ಹೆಚ್ಚು ರಕ್ತದ ಒತ್ತಡ, **(High B.P.)** ಸಕ್ಕರೆ ಖಾಯಿಲೆ **(Diabetes Mellitas)** ಅತಿ ಹೆಚ್ಚು ಕೆಟ್ಟ ಜಿಡ್ಡು **(Hypercholestremia)** ಹೃದಯಾಘಾತ **(Heart Attack)** ನಂತಹ ಮಾರಣಾಂತಿಕ ರೋಗದಿಂದ ಸಾಯುವ ಯುವಕರ ಸಂಖ್ಯೆ ಹೆಚ್ಚುತ್ತಿದೆ. ಸಾಂಕ್ರಾಮಿಕವಲ್ಲದ ನಾಲ್ಕೂ ಚಾಂಡಾಳ ಕಡಿಗಳಲ್ಲದೇ ಮಕ್ಕಳಲ್ಲಿ ಕಲಿಕೆಯ ಸಮಸ್ಯೆ ಹೆಚ್ಚುತ್ತಿದೆ. ಕಾರಣ ಜಂಕ್ ಫುಡ್‌ನಿಂದ ಹಾಳಾಗುವ ಜ್ಞಾಪಕ ಶಕ್ತಿ ಮತ್ತು ಮಾನಸಿಕ ದುಗುಡ ಜಂಕ್‌ಫುಡ್ ಪದೇ ಪದೇ ತಿನ್ನುವುದರಿಂದ ಹಸಿವೆ ಮತ್ತು ಜೀರ್ಣ ಶಕ್ತಿ ಕ್ರಮೇಣ ಕಡಿಮೆ ಆಗಿ ಅನಾರೋಗ್ಯ ತಾಂಡವವಾಡುತ್ತಿದೆ. ಆದ್ದರಿಂದ ಮಕ್ಕಳಿಗೆ ಚಾಕೋಲೇಟ್, ಕೇಕ್, ಕುಕ್ಕೀಸ್, ಸಕ್ಕರೆ ಕ್ಯಾಂಡೀಸ್, ಮೈದಾದಲ್ಲಿ ಮಾಡಿದ **Fast Foods, Chips, Muffins, Bolonga, Burgers, Pizzas, Donuts, Noodles** ಪಾನೀಯಗಳು ಅಂದರೆ ವಿದೇಶದ ಹಲವಾರು ತಿಂಡಿ ತಿನಿಸುಗಳೆಲ್ಲ **Junk Food** ಎಂದು ಅವರೇ ಬಿಟ್ಟು ಅವರು ಭಾರತೀಯ ಸಸ್ಯಹಾರಕೆ ಮಾರುಹೋಗುತ್ತಿದ್ದಾರೆ.

# ಕೀಟಭಕ್ಷಕ ಸಸ್ಯಗಳು !

– ಚಳ್ಳಕೆರೆ ಯರ್ರಿಸ್ವಾಮಿ
ಜಿಲ್ಲಾ ಸ್ಕೌಟ್ ಆಯುಕ್ತರು, ಚಿತ್ರದುರ್ಗ

ವಿಜ್ಞಾನ-ಜ್ಞಾನ

ಗೆಳೆಯರೇ, ಭೂಮಿಯ ಮೇಲೆಲ್ಲಾ ಸಸ್ಯ ಸಂಪತ್ತು ಆವರಿಸಿದೆ. ಸಸ್ಯಗಳು ಇಲ್ಲದೇ ನಮ್ಮ ಬದುಕು ಸಾಗುವುದಿಲ್ಲ. ಅವುಗಳ ಮುಖ್ಯ ಕಾರ್ಯಗಳಲ್ಲಿ ಒಂದು ನಮಗೆ ಆಹಾರ ಒದಗಿಸುವುದು, ಎಲ್ಲಾ ಸಸ್ಯಗಳೂ ಆಹಾರಕ್ಕೆ ಯೋಗ್ಯವಲ್ಲ. ಕೆಲವು ಸಸ್ಯಗಳು ವಿಷಕಾರಿಯೂ ಹೌದು.

ಸಸ್ಯ ಪ್ರಭೇಧಗಳು ಅಪಾರ. ಹಲವು ಬಗೆಯ ಕುತೂಹಲಕರ ಸಸ್ಯಗಳು ಭೂಮಿಯ ಮೇಲೆ ಕಂಡುಬರುತ್ತವೆ. ಅವುಗಳಲ್ಲಿ ಮುಖ್ಯವಾದವುಗಳು ಕೀಟಭಕ್ಷಕ ಸಸ್ಯಗಳು. ಅವುಗಳು ತಮ್ಮ ಬೆಳವಣಿಗೆಗೆ ಬೇಕಾದ ಪೋಷಕಾಂಶಗಳನ್ನು ಪಡೆಯಲು ಕೀಟಗಳನ್ನು ಹಿಡಿದು ಭಕ್ಷಿಸುವುದು ಕುತೂಹಲಕರವಾಗಿದೆ. ನಿಸರ್ಗವೇ ಅವುಗಳಿಗೆ ಅಂತಹಾ ಕೀಟಗಳನ್ನು ಭಕ್ಷಿಸಲು ಈ ಸಸ್ಯಗಳು ಹಲವು ತಂತ್ರಗಳನ್ನು ರೂಪಿಸಿಕೊಂಡು ಹಲವು ಬಗೆಯ ಕೀಟಾಹಾರಿ ಸಸ್ಯಗಳಾಗಿ ರೂಪುಗೊಂಡಿವೆ. ಅವುಗಳ ಕೀಟಬೇಟೆಯ ಸೋಜಿಗ. ಒಂದು ಸಸ್ಯ ಹೂಜಿ ಆಕಾರದಲ್ಲಿದ್ದು ಹುಳು ಹಿಡಿದು ಮೇಲೊಂದು ಮುಚ್ಚಳ ಮುಚ್ಚುವಂತಿದ್ದರೆ, ಇನ್ನೊಂದು ಬಣ್ಣದ ಅಂಟನಿಂದ ಕೀಟಗಳನ್ನು ಆಕರ್ಷಿಸಿ ಆ ಅಂಟನಿಂದಲೇ ಕೀಟಗಳನ್ನು ಕೊಲ್ಲುತ್ತದೆ.



ಇಂತಹಾ ಸಸ್ಯಗಳಿಗೆ ಒಂದು ಉತ್ತಮ ಉದಾಹರಣೆ, ಅಮೇರಿಕಾದ ಉತ್ತರ ಮತ್ತು ದಕ್ಷಿಣ ಕರೋಲಿನಾ ಪ್ರದೇಶದಲ್ಲಿ ಕಂಡುಬರುವ ಈ ಕೀಟಭಕ್ಷಕದ ಹೆಸರು ವೀನಸ್ ಫ್ಲೈಟ್ರಾಪ್. ಸುತ್ತಲೂ ಮುಳ್ಳುಗಳಿರುವ ಎರಡು ಅಗಲ ಎಲೆಗಳು ತೆರೆದುಕೊಂಡಿರುವ ರಚನೆ ಈ ಗಿಡಕ್ಕಿದೆ. ಎಲೆಗಳ ಮೇಲೆ ಸುವಾಸನೆ ಬೆರೆತ ಸಿಹಿದ್ರವದ ಲೇಪನವಿರುತ್ತದೆ. ಈ ಸುವಾಸನೆಯಿಂದ ಆಕರ್ಷಿತವಾದ ಕೀಟವು ಎಲೆಗಳ ಮಧ್ಯೆ ಬರುತ್ತಿದ್ದಂತೆ ಎಲೆಗಳ ಮೇಲೆ ಇರುವ ಕೂದಲುಗಳು ಸೂಕ್ಷ್ಮ ಸಂವೇದಿಯಂತೆ ಕೆಲಸ ಮಾಡಿ ಎಲೆಗಳು ಕ್ಷಣಮಾತ್ರದಲ್ಲಿ ಮುಚ್ಚಿಕೊಳ್ಳುವಂತೆ ಮಾಡುತ್ತವೆ. ಎಲೆಗಳ ಮಧ್ಯದಲ್ಲಿ ಸಿಕ್ಕಿಹಾಕಿಕೊಂಡ ಹುಳುವನ್ನು ಕೊಂದು ಆಹಾರವಾಗಿ ಸಸ್ಯವು ಬಳಸಿಕೊಳ್ಳುತ್ತದೆ. ಹುಳುವಿನ ದೇಹದಿಂದ ಬೇಕಾದ ಎಲ್ಲಾ ಪೋಷಕಾಂಶಗಳನ್ನೂ, ಹೀರಿಕೊಂಡನಂತರ, ಹೊಸ ಹುಳುವಿನ ಬೇಟೆಗಾಗಿ ಪುನಃ ಎಲೆಗಳು ತೆರೆದುಕೊಳ್ಳುತ್ತವೆ!

ಮನುಷ್ಯರನ್ನೂ ಹಿಡಿದುಕೊಲ್ಲುವ ಸಸ್ಯಗಳು ಇರುವುದಾಗಿ ಫ್ಯಾಂಟಸಿ ಕಥೆಗಳಲ್ಲಿ ಬರೆದಿದ್ದಾರೆ. ಇಂತಹಾ ಕಥೆಗಳನ್ನು ಆಧರಿಸಿ ಸಿನಿಮಾಗಳನ್ನೂ ತೆಗೆದಿದ್ದಾರೆ. ಆದರೆ, ವಾಸ್ತವದಲ್ಲಿ ಮನುಷ್ಯರನ್ನು ಭಕ್ಷಿಸುವ ಯಾವ ಸಸ್ಯಗಳೂ ಭೂಮಿಯ ಮೇಲೆ ಇಲ್ಲ. ಇವು ಕೇವಲ ರಂಜನೆಯ ಕತೆಗಳಷ್ಟೆ.

## ಸ್ಕೌಟ್ಸ್ ಮತ್ತು ಗೈಡ್ಸ್ ರಸಪ್ರಶ್ನೆ - 05

- ಎಂ.ಎನ್ ಷಡಕ್ಷರಿ
ಜಿಲ್ಲಾ ಮುಖ್ಯ ಆಯುಕ್ತರು, ಚಿಕ್ಕಮಗಳೂರು

1. WOSM ನ್ನು ವಿಸ್ತರಿಸಿ
2. ಸ್ಕೌಟ್ ಶಿಭಿರಗಳಲ್ಲಿ ತಾತ್ಕಾಲಿಕ ಸಂಡಾಸವನ್ನು ನಿರ್ಮಿಸಲು ತೆಗೆಯಬೇಕಾದ ಗುಳಿಯ ಅಳತೆಯೇನಿರಬೇಕು?
3. ಒಬ್ಬ ಸ್ಕೌಟ್ ಗೊರಕೆ ಹೊಡೆಯುವುದನ್ನು ಹೇಗೆ ಕಡಿಮೆ ಮಾಡಿಕೊಳ್ಳಬಹುದು?
4. ಮೆಫೆಕಿಂಗ್ ಯುದ್ದದ ಸಮಯದಲ್ಲಿ ಸ್ಥಳೀಯ ಬಾಲಕರನ್ನು ಒಟ್ಟುಗೂಡಿಸಿ "ಮೇಫ್‌ಕಿಂಗ್ ಕೆಡೆಟ್ ಕೋರ್" ಎನ್ನುವ ದಳವನ್ನು ಪ್ರಾರಂಭಿಸಿದವರು ಯಾರು?
5. ನೀರಿನಲ್ಲಿ ಮುಳುಗುತ್ತಿರುವವನನ್ನು ರಕ್ಷಿಸಲು ಎಸೆಯಲಾಗುವ 42 ಅಡಿ ಉದ್ದದ ಹಗ್ಗಕ್ಕೆ ಏನನ್ನುತ್ತೇವೆ?
6. ಒಬ್ಬ ಸ್ಕೌಟ್/ಗೈಡ್ ಕೀಳು (ಅವಾಚ್ಯ) ಶಬ್ದ ಉಪಯೋಗಿಸಿದರೆ, ಅದು ನಮ್ಮ ನಿಯಮದ ಯಾವ ವಿಧಿಯನ್ನು ಉಲ್ಲಂಘಿಸಿದಂತಾಗುತ್ತದೆ?
7. ಬ್ರೌನ್ ಸೀ ಐಲ್ಯಾಂಡ್‌ನಲ್ಲಿ ನಡೆದ ಮೊದಲ ಪ್ರಾಯೋಗಿಕ ಶಿಭಿರದಲ್ಲಿ 20 ಮಕ್ಕಳನ್ನು ವಿಂಗಡಿಸಲಾದ ನಾಲ್ಕು ಪ್ಯಾಟ್ರೋಲ್‌ಗಳ ಹೆಸರೇನು?
8. ಟೋಪೊಗ್ರಾಫಿಕಲ್ ಮ್ಯಾಪ್‌ನಲ್ಲಿ, ಭೂಮಿಯ ಮೇಲಿರುವ ಸ್ಥಿರ ವಸ್ತುಗಳನ್ನು ಸೂಚಿಸಿರುವ ಚಿನ್ಹೆಗಳಿಗೆ ಏನನ್ನುತ್ತೇವೆ?
9. ಬಿ.ಪಿ. ಯವರನ್ನು ಮದುವೆಯಾಗುವುದಕ್ಕೆ ಮೊದಲಿನ ಲೇಡಿ ಬಿ.ಪಿಯ ಹೆಸರೇನು?
10. ಕುದುರೆ ಲಾಳದ ಗುರುತಿರುವುದು ಯಾವ ಪ್ರಾವಿಣ್ಯತಾ ಪರೀಕ್ಷೆಯ ಪದಕ?

ವಿ.ಸೂ.: ಸರಿಯಾದ ಉತ್ತರಗಳನ್ನು ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಲಾಗುವುದು.
ಉತ್ತರ ಕೊಟ್ಟವರ ಹೆಸರುಗಳನ್ನು ಪ್ರಕಟಿಸಲಾಗುವುದು.

### ಸ್ಕೌಟ್ ಮತ್ತು ಗೈಡ್ಸ್ ರಸಪ್ರಶ್ನೆ - 04 ಉತ್ತರಗಳು

1. ಹರ್ಟ್ಸ್, ಆರ್ಮಸ್ಟ್ರಾಂಗ್, ಮಾರ್ಕೋನಿ.
2. ಪಂಡಿತ್ ಹರ್‌ದಯಾಳ್ ಕುಂಜ್ರು
3. ವಿಲಿಯಂ ಡಿ ಬಾಯ್ಸ್
4. ಶಾಂತಿ ದೂತ ಪಾರಿತೋಷಕ
5. ವ್ಯಾಯಾಮ ಮತ್ತು ಪ್ರಕೃತಿ ಒಡನಾಟ
6. ಗುಂಪನ್ನು ನಿಯಂತ್ರಿಸುವುದು
7. ಸೈಕಲ್ ಸವಾರಿ ಮಾಡುತ್ತಿರುವ ಯುವ ಕೆಡೆಟ್
8. ಕಾಂಟೂರ್ ರೇಖೆಗಳು
9. ಉಸಿರು ಕಟ್ಟಿದಾಗ
10. ವೀರ್ ದೇವ್ ವೀರ್

## ಸ್ಕೌಟಿಗೆ ಸೇರು

- ದೇವೇಂದ್ರ ಕಟ್ಟಿಮನಿ
ಸ್ಕೌಟ್ ಮಾಸ್ಟರ್
ಸರ್ಕಾರಿ ಪ್ರಾಥಮಿಕ ಶಾಲೆ, ಇಡಪನರು ತಾ:ಜಿ: ರಾಯಚೂರು

ಎಲ್ಲ ಮಕ್ಕಳು ಸೇರಬೇಕಣ್ಣ, ಸ್ಕೌಟ್ ಗೈಡಿಗೆ
ಎಲ್ಲ ಮಕ್ಕಳು ಸೇರಬೇಕಣ್ಣ ॥ಪ॥

ದೇಶ ನಾವು ಕಾಯಬೇಕು, ಸೇವೆ ನಮ್ಮ ಧ್ಯೇಯ ಹಕ್ಕು
ಬನ್ನಿ ಸ್ಕೌಟು-ಗೈಡು, ರೋವರ್-ರೇಂಜರೆಲ್ಲ ನಕ್ಕು ನಕ್ಕು ॥1॥

ನೋಡಬೇಕು ರಾಜ್ಯ ಸುತ್ತಿ, ಹೊಸ ಆಸೆ ಮನಕೆ ಬಿತ್ತಿ,
ರಂಜಿಸುವ ಮಂಜಿನಲ್ಲಿ, ಸಂಜೆ ಸೂರ್ಯನ ಕೆಂಪಿನಲ್ಲಿ ॥2॥

ಎಲ್ಲ ಧರ್ಮ ಒಂದೆ ನೋಡು, ಆಕಾಶದ ನೀಲಿ ಜಾಡು,
ಎಲ್ಲ ಮೂಲವ ತಾನೆ ತಿಳಿಯಲು, ಗಂಟಿನಾಟ ಆಡಿ ನೋಡಲು ॥3॥

ನಾವು ಮಾನವರಾಗಬೇಕು, ಸಭ್ಯ ಸದ್ಗುಣ ಕಲಿಯಬೇಕು,
ನಾಳೆ ನಮ್ಮ ದೇಶವಾಳಲು, ವಿಶ್ವ ಮಾನವ ಪ್ರೇಮ ಬೆಳೆಸಲು ॥4॥

ಒಳ್ಳೆ ಕೆಲಸವು ನಿತ್ಯಮಾಡಿ, ಸತ್ಯಪಥದಲಿ ಶಿಬಿರ ಕೂಡಿ
ಸ್ವಚ್ಛ ಭಾರತದುಸಿರನಲ್ಲಿ, ನಿಷ್ಪಕ್ಷ ಭಾರತ ನಾವು ನೋಡಲು ॥5॥

ಹಸಿರೆ ನಮ್ಮ ಉಸಿರು ಎನುತ, ಮರವ ಕಡಿಯದೆ ಗಿಡವ ನೆಡುತ,
ದೀಕ್ಷೆ ಪಡೆದ ಸಾಕ್ಷಿಯಲ್ಲಿ, ವಿಶ್ವ ಸಹೋದರ ನಾವು ಆಗಲು ॥6॥

ಎಲ್ಲ ಮಕ್ಕಳು ಸೇರಬೇಕಣ್ಣ, ಸ್ಕೌಟ್ ಗೈಡಿಗೆ
ಎಲ್ಲ ಮಕ್ಕಳು ಸೇರಬೇಕಣ್ಣ ॥ಪ॥

## ಅಪಾಯಕ್ಕೆ ಮೈಯೊಡ್ಡುವುದು

# "ಪರೀಕ್ಷೆಗೆ ಒಳಪಡದವನು ಸಾಧಿಸಲಾರ"

**ಎಂ.ಎನ್ ಷಡಕ್ಷರಿ**
ಜಿಲ್ಲಾ ಮುಖ್ಯ ಆಯುಕ್ತರು, ಚಿಕ್ಕಮಗಳೂರು

ಕೋಪನ್‌ಹೇಗನ್ ನಗರದ ನಗರಸಭಾ ಕಟ್ಟಡದಲ್ಲಿ ಒಂದು ನಿಧಾನವಾಗಿ ಚಲಿಸುವ ಸ್ವಯಂ ಚಾಲಿತ ಲಿಫ್ಟ್ ಇದೆ. ಅದು ನಿಧಾನವಾಗಿ ಚಲಿಸುತ್ತಲೇ ಇರುತ್ತದೆ (ಟ್ರಾಮ್ ರೀತಿ). ಮೇಲೆ ಮತ್ತು ಕೆಳಗೆ ಹೋಗುವವರು ಒಳಗೆ ಅಥವಾ ಹೊರಗೆ ಅಡಿ ಇಡಬೇಕು, ಇದು ಬಹಳ ಜಾಗರೂಕತೆಯಿಂದ ಮತ್ತು ಚುರುಕಾಗಿ ಮಾಡಬೇಕಾದ ಕೆಲಸ. ಸ್ವಲ್ಪ ಎಡವಟ್ಟಾದರೂ ಇಲ್ಲಾ ಮೇಲೆ ತಲೆ ಬಡಿಯುತ್ತದೆ ಅಥವಾ ಗುಂಡಿಗೆ ಹಾರಿದಂತಾಗುತ್ತದೆ.

ವೃದ್ಧೆಯೊಬ್ಬಳು ಸಮೀಪ ಬಂದು ಅದನ್ನು ವೀಕ್ಷಿಸುತ್ತಾ ನಿಂತಳು. ಒಂದು ಲಿಫ್ಟ್ ಸಾಗಿದಾಗ ಅದರ ಗೋಜಿಗೆ ಹೋಗಲಿಲ್ಲ, ಮತ್ತೊಂದು ಬಂದಾಗ ಅತೀ ಶೀಘ್ರವಾಗಿ ಒಳಹೋಗಲು ಮತ್ತು ಮಗದೊಂದು ಬಂದಾಗ ತಡವಾಗಿ, ಹೀಗೆ ಸುಮಾರು ಇಪ್ಪತ್ತು ನಿಮಿಷ ಪ್ರಯತ್ನಿಸಿ ನಂತರ ಕೈಚೆಲ್ಲಿ ಹೊರಟು ಹೋದಳು. ಆಕೆ ಅಪಾಯಕ್ಕೆ ಹೆದರಿಕೊಂಡು ಮೇಲ್ ಮಹಡಿಯಲ್ಲಿ ಅವಳಿಗಾಗಿ ಕಾಯುತ್ತಿದ್ದ ಅವಕಾಶದಿಂದ ವಂಚಿತಳಾದಳು. ಇದು ನಮ್ಮೆಲ್ಲರಿಗೂ ಒಂದು ನೀತಿ ಪಾಠವಾಗಬೇಕು.

ಜೀವನದಲ್ಲಿ ಯಾವುದೇ ಹೆಜ್ಜೆಯಿಡಬೇಕಾದರೆ ಎಚ್ಚರಿಕೆ ಅಗತ್ಯ. ಒಂದು ಸಣ್ಣ ಹೆಜ್ಜೆ ನಮ್ಮ ಜೀವನದ ದಿಕ್ಕನ್ನೇ ಬದಲಿಸಬಹುದು, ಒಳ್ಳೆಯದು ಅಥವಾ ಕೆಟ್ಟ ರೀತಿಯಲ್ಲಿ.

ಒಂದು ಸಣ್ಣ ಬೀಜದಿಂದ ಬೃಹತ್ ಓಕ್ ಮರವು ಬೆಳೆಯುವ ಹಾಗೆ, ಯುವಕರು ತೆಗೆದುಕೊಳ್ಳುವ ಒಂದು ನಿರ್ಣಯವು ಅವರ ಜೀವನದ ಭವಿಷ್ಯವನ್ನು ರೂಪಿಸುತ್ತದೆ. ಪರಿಣಾಮದ ಅರಿವಿಲ್ಲದಿದರುವುದರಿಂದ ಯುವಕರು ಹೆಚ್ಚು ಧೈರ್ಯದಿಂದ ಮುನ್ನುಗ್ಗುತ್ತಾರೆ. ಈ ವಿಷಯದಲ್ಲಿ ಹಿರಿಯರ ಮಾರ್ಗದರ್ಶನ ಅವಶ್ಯಕ. ಎಲ್ಲರೂ ಯಾವಾಗಲೂ "ಸುರಕ್ಷತೆ ಮೊದಲು" ಎಂದು ಯೋಚಿಸಿದ್ದರೆ, ಇಂಗ್ಲೀಷರು ಅಪಾಯಕರ ಸಮುದ್ರಯಾನ, ಹೊಸ ಪ್ರದೇಶಗಳ ಶೋಧ ಮತ್ತು ಲೆಕ್ಕವಿಲ್ಲದ ರಾಜ್ಯಗಳ ಅಧಿಪತ್ಯ ಸಾಧ್ಯವಾಗುತ್ತಿರಲಿಲ್ಲ.

ದಕ್ಷಿಣ ಆಫ್ರಿಕಾದ ಪೋಲೀಸರ ಧ್ಯೇಯ "ಸದಾ ಸಿದ್ಧನಾಗಿರು" ಎಂಬುದು ಯಾವುದೇ ಕೆಲಸಕ್ಕಾಗಲೀ ಸಿದ್ಧನಾಗಿರು ಎಂದರ್ಥ. ಮಕ್ಕಳಿಗೆ ಲಸಿಕೆ ಹಾಕುವುದು, ಕುದುರೆಗಳಿಗೆ ತರಬೇತಿ ಕೊಡುವುದು, ಸಿಪಾಯಿಗಳಿಗೆ ಮನೆ ನಿರ್ಮಿಸುವುದು, ಬೆಂಕಿ ಆರಿಸುವುದು, ಪ್ರಥಮ ಚಿಕಿತ್ಸೆ ನೀಡುವುದು ಇತರೆ ಇತರೆ....................

ಈ ರೀತಿ ಯಾವುದೇ ಪರಿಸ್ಥಿತಿ ಎದುರಿಸಲು ಆತ್ಮ ಸ್ಥೈರ್ಯವಿರುವ ವ್ಯಕ್ತಿತ್ವ ಹೊಂದಿರುವ ಯುವಕರನ್ನು ಸಮಾಜಕ್ಕೆ ನೀಡುವ ಅವಶ್ಯಕತೆಯಿದೆ.

(ಬಿ.ಪಿ.ಯವರ ಲೈಫ್ಸ್ ಸ್ನಾಗ್ಸ್ ಪುಸ್ತಕದಿಂದ ಆಯ್ದಭಾಗ)

Rover Scouts of HAL Rover Crew undertook one day Hike cum Costal Trekking to Udupi on 29th & 30th June. The Rovers visited Sri Krishna Temple and they Met Smt. Shantha V. Acharaya District. Chief Commissioner of Udupi at her residence.






ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಸ್ಥೆ ಆಯೋಜಿಸಿದ್ದ ವಿಶ್ವಪರಿಸರ ದಿನಾಚರಣೆ ಪ್ರಯುಕ್ತ 5ಲಕ್ಷ ಬೀಜದುಂಡೆಗಳನ್ನು ತಯಾರಿಸುವ ಕಾರ್ಯಕ್ರಮಕ್ಕೆ ಪ್ರಾದೇಶಿಕ ಅರಣ್ಯಾಧಿಕಾರಿ ಶ್ರೀ ಬಸವರಾಜ್ ಚಾಲನೆ ನೀಡಿದರು. ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಬಿ.ಕೆ. ಶಿವಪ್ಪ ಹಾಗೂ ಇತರ ಪದಾಧಿಕಾರಿಗಳು ಮತ್ತು ಸ್ಕೌಟ್ಸ್‌ಗಳು ಚಿತ್ರದಲ್ಲಿದ್ದಾರೆ.

ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕಿನ ಆದರ್ಶ ವಿದ್ಯಾಲಯ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳಿಂದ ವಿಶ್ವ ಪರಿಸರ ದಿನಾಚರಣೆ ಅಂಗವಾಗಿ 1.5 ಲಕ್ಷ ಬೀಜದುಂಡೆಗಳನ್ನು ತಯಾರಿಸಿ ವಲಯ ಅರಣ್ಯಾಧಿಕಾರಿ ಶ್ರೀ ಸೈಯದ್ ದಾದಾ ಕಲಂದರ್, ಉಪವಲಯ ಅರಣ್ಯಾಧಿಕಾರಿ ಶ್ರೀ ರವಿ .ಎಂ ಇವರುಗಳಿಂದ ಪ್ರಶಂಶೆಯನ್ನು ಪಡೆದರು.





ವಿಶ್ವಯೋಗ ದಿನಾಚರಣೆ ಪ್ರಯುಕ್ತ ಹಾವೇರಿ ಜಿಲ್ಲೆಯ ಸ್ಕೌಟ್ಸ್‌ಗಳು ಯೋಗ ಕಾರ್ಯಕ್ರಮದಲ್ಲಿ ತೊಡಗಿರುವುದು.

ಜೂನ್ 21ರಂದು ಬೆಂಗಳೂರು ದಕ್ಷಿಣ ಜಿಲ್ಲಾ ಸಂಸ್ಥೆಯಿಂದ ಶಾಂತಿಗೃಹದಲ್ಲಿ ಏರ್ಪಡಿಸಿದ್ದ 2019-20ನೇ ಸಾಲಿನ ವಾರ್ಷಿಕ ಕಾರ್ಯಕ್ರಮಗಳ ಯೋಜನೆ ಪುಸ್ತಕ ಬಿಡುಗಡೆ ಸಮಾರಂಭದಲ್ಲಿ ಶ್ರೀ ಪಿ.ಜಿ.ಆರ್. ಸಿಂಧ್ಯ, ಶ್ರೀ ಕೆ. ಗಂಗಪ್ಪಗೌಡ, ಶ್ರೀ ಪಿ. ಪಳನಿ, ಶ್ರೀ ಎಂ.ಎಸ್. ಸತೀಶ್, ಶ್ರೀ ಎಲ್.ಟಿ. ಲೋಕೇಶ್, ಶ್ರೀ ಎಂ. ಪ್ರಭಾಕರ್ ಭಟ್ ಶ್ರೀ ಬಿ.ಎಸ್. ಅನಂತ್, ಶ್ರೀ ಸಿದ್ಧಗಂಗಯ್ಯ ಶ್ರೀಮತಿ ಉಷಾ ದಾಮೋದರನ್, ಶ್ರೀಮತಿ ವಿಕ್ಟೋರಿಯಾ ಅಮಲರಾಣಿ ಶ್ರೀ ಶೇಖರ್, ಶ್ರೀ ಪಿ. ಚಂದ್ರು ಚಿತ್ರದಲ್ಲಿದ್ದಾರೆ.





ರಾಮನಗರ ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ಜರುಗಿದ 2019-20ನೇ ಸಾಲಿನ ವಾರ್ಷಿಕ ಕಾರ್ಯಕ್ರಮಗಳ ಯೋಜನೆ ಪುಸ್ತಕ ಬಿಡುಗಡೆ ಸಮಾರಂಭದಲ್ಲಿ ಜಿಲ್ಲಾ ಕಾರ್ಯದರ್ಶಿ ಶ್ರೀ ಶಿವನಂಜಪ್ಪ, ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ಭಾರತಿ, ಶ್ರೀಮತಿ ಕುಮಾರಿ ಹೊನ್ನಮ್ಮ, ಶ್ರೀ ಸಂಗಯ್ಯ ಮಠಪತಿ ಹಾಗೂ ಇತರರು ಚಿತ್ರದಲ್ಲಿದ್ದಾರೆ.

ಮೈಸೂರಿನಲ್ಲಿ ನಡೆದ 2019-20ನೇ ಸಾಲಿನ ವಾರ್ಷಿಕ ಕಾರ್ಯಕ್ರಮಗಳ ಯೋಜನೆ ಪುಸ್ತಕ ಬಿಡುಗಡೆ ಸಮಾರಂಭದಲ್ಲಿ ಶ್ರೀ ಡಿ.ಆರ್. ಅಮಿತ್ ಹಿರಿಯ ಉಪನ್ಯಾಸಕರು, ಡಯಟ್, ಮೈಸೂರು ಹಾಗೂ ಜಿಲ್ಲಾ ನೋಡಲ್ ಅಧಿಕಾರಿಗಳು ಜಿಲ್ಲೆ ಮತ್ತು ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು ಭಾಗವಹಿಸಿದ್ದರು.






ಜೂನ್ 28ರಂದು ದಕ್ಷಿಣ ಕನ್ನಡ ಜಿಲ್ಲೆ, ಉಪ್ಪಿನಂಗಡಿ ಸ್ಥಳೀಯ ಸಂಸ್ಥೆಯಿಂದ 2019-20ನೇ ಸಾಲಿನ ವಾರ್ಷಿಕ ಕಾರ್ಯಕ್ರಮಗಳ ಯೋಜನೆ ಪುಸ್ತಕ ಬಿಡುಗಡೆ ಸಮಾರಂಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತ ಡಾ॥ ಎನ್.ಜಿ. ಮೋಹನ್, ಸ್ಥಳೀಯ ಸಂಸ್ಥೆ ಅಧ್ಯಕ್ಷ ಶ್ರೀ ಅಬ್ರಾಹಂ ವರ್ಗೀಸ್ ಹಾಗೂ ಇತರ ಜಿಲ್ಲಾ ಮತ್ತು ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.

Regd. as News Paper (Magazine) RNI No: 13348/1959. Postal Regd. No. KA/BGGPO/2580/2018-20
Licensed to Post Without Prepayment License WPP NO. 340, Date of Publishing 28th of Every Month
Posted at: Bengaluru PSO, Mysore Road, Bengaluru-26 on every month of 28th or 30th (No. of Pages: 5

## ವಿವಿಧ ಜಿಲ್ಲಾ ಸಂಸ್ಥೆಗಳಲ್ಲಿ ನಡೆದ ಚಟುವಟಿಕೆಗಳಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ರೋವರ್ಸ್-ರೇಂಜರ್ಸ್‌ಗಳು ಪಾಲ್ಗೊಂಡಿರುವುದು


ವಿಜಯಪುರ


ಉಡುಪಿ


ಶಿವಮೊಗ್ಗ


ದಾವಣಗೆರೆ


ಬೆಂಗಳೂರು ಪೂರ್ವ


ರಾಮನಗರ



If not delivered, please return to :
THE EDITOR, Karnataka Scout & Guide
State Headquarters, Shanthi Gruha
#39, Palace Road, Bengaluru - 560 001
Ph.: 080-22260017, 22267470
e-mail.: shq@bsgkarnataka.org
shanthigruha@scout.org.in
www.bsgkarnataka.org

Published by : The Bharat Scouts & Guides, Karnataka, State Headquarters
Shanthi Gruha #39, Palace Road, Bengaluru - 560 001. Publisher & Editor : K. Gangappa Gowda, Printed by : L. Lingappa
M.D. at Sathyasri Printers Pvt. Ltd., 16/1, 3rd Cross, 2nd Main, Kasturiba Nagar, Mysore Road, Bengaluru 26